# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

---

ಇತರ ಪ್ರಾಣಿಗಳಿಂದ ಮಾನವರನ್ನು ಪ್ರತ್ಯೇಕಪಡಿಸುವ ಗುಣಗಳಲ್ಲಿ ಅವನಿಗಿರುವ ಲಲಿತಕಲಾಸಕ್ತಿಯೂ ಒಂದಾಗಿದೆ. ಶಿಲ್ಪ ಚಿತ್ರ, ಕವಿತ್ವಶಕ್ತಿಯಂತಹವುಗಳೂ, ಅವುಗಳನ್ನು ರಚಿಸುವ ರಸನೆಯೂ ಮನುಷ್ಯರಿಗಿದೆ. ಅಂತಹವರಲ್ಲಿ ಅವುಗಳಿಂದ ಲಾಭವೇನಿಲ್ಲ, ಅವುಗಳಿಗೆ ಮಾಡುವುದು ದಂಡಖರ್ಚು ಎನ್ನುವ ಲಾಭ ಮಾತ್ರವನ್ನೇ ನೋಡುವವರೂ ಇದ್ದಾರೆ. ಅಂತಹ ದೊಡ್ಡ ಮನುಷ್ಯನೊಬ್ಬನೊಂದಿಗೆ ಕವಿಯೊಬ್ಬನಿಗಾಗುವ ಘರ್ಷಣೆಯನ್ನು ಈ ಸಂಚಿಕೆಯಲ್ಲಿರುವ "ಕವಿ ಸನ್ಮಾನ" ಕಥೆಯಲ್ಲಿ ನೋಡಿರಿ.

## ಅಮರವಾಣಿ

ಆಮರಣಾಂತಾಃ ಪ್ರಣಯಾಃ ಕೋಪಾಸ್ತತ್ ಕ್ಷಣಭಂಗುರಾಃ
ಪರಿತ್ಯಾಗಶ್ಚ ನಿಸ್ಸಂಗಾ ಭವಂತಿ ಹಿ ಮಹಾತ್ಮನಾಮ್

ದೊಡ್ಡವರ ಪ್ರೇಮವು ಜೀವಿತಾಂತ್ಯದವರೆಗೂ, ಕೋಪವು ಕ್ಷಣಭಂಗುರವಾಗಿಯೂ, ತ್ಯಾಗವು ಪ್ರತಿಫಲಾಪೇಕ್ಷೆಯಿಲ್ಲದ್ದಾಗಿಯೂ ಇರುತ್ತವೆ.

---

ಸಂಪುಟ : ೨೨ ಅಕ್ಟೋಬರ್ '೮೨ ಸಂಚಿಕೆ : ೪

ಬಿಡಿ ಪ್ರತಿ ರೂ. ೨-೫೦ : : ವಾರ್ಷಿಕ ಚಂದಾ ರೂ. ೩೦-೦೦






CHITRA

# ಕಲ್ಯಾಣ ಋಷಿ

ಒಂದಿದು ಕಾಲದಲ್ಲಿ ಕೆಲವು ಮಂದಿ ಋಷಿಗಳು ಸೇರಿ ದೀಕ್ಷೆ ವಹಿಸಿ ಯಜ್ಞಮಾಡಿ ಸ್ವರ್ಗವಾಸಕ್ಕೆ ಬೇಕಾದ ಅರ್ಹತೆಯನ್ನು ಸಂಪಾದಿಸಿಕೊಂಡರು. ಆದರೆ ಅವರಿಗೆ ಸ್ವರ್ಗಕ್ಕೆ ಹೋಗುವ ಮಾರ್ಗವು ತಿಳಿಯಲಿಲ್ಲ. ಈ ಋಷಿಗಳಲ್ಲಿ ಕಲ್ಯಾಣನೆಂಬ ಋಷಿ ಜ್ಞಾನದಲ್ಲಿಯೂ, ದೀಕ್ಷೆಯಲ್ಲಿಯೂ ಎಲ್ಲರಿಗಿಂತ ಹೆಚ್ಚಿನವನಾಗಿ ಹೆಸರು ಪಡೆದಿದ್ದನು. ಆ ಕಾರಣದಿಂದ ಉಳಿದ ಋಷಿಗಳು ಅವನನ್ನು "ನಾವೆಲ್ಲರೂ ಸ್ವರ್ಗಕ್ಕೆ ಹೋಗುವ ಮಾರ್ಗ ನೀವೇ ತೋರಿಸಬೇಕು" ಎಂದು ಪ್ರಾರ್ಥಿಸಿದರು.

ಕಲ್ಯಾಣನು ಸ್ವರ್ಗಮಾರ್ಗವನ್ನು ಅನ್ವೇಷಿಸುತ್ತ ಹೊರಟನು. ಅರಣ್ಯದಲ್ಲಿ ಸ್ವಲ್ಪ ದೂರ ಹೋದ ಮೇಲೆ ಅವನಿಗೆ ಊರ್ಣಾಯುವೆಂಬ ಗಂಧರ್ವನು ಇದಿರಾದನು. ಕಲ್ಯಾಣನು ತನ್ನ ಸಮಸ್ಯೆಯನ್ನು ಗಂಧರ್ವನೊಂದಿಗೆ ಹೇಳಿದನು. ಗಂಧರ್ವನು ಅವನ ಮೇಲೆ ದಯೆ ತೋರಿಸಿ, ಒಂದು ಮಂತ್ರವನ್ನು ಉಪದೇಶ ಮಾಡಿದನು. ಸ್ವರ್ಗವಾಸಕ್ಕೆ ಅರ್ಹರಾದವರು ಆ ಮಂತ್ರವನ್ನು ಜಪಿಸಿದರೆ ಅವರ ಮುಂದೆ ಸ್ವರ್ಗ ದ್ವಾರಗಳು ತೆರೆಯಲ್ಪಡುತ್ತವೆ.

ಕಲ್ಯಾಣನು ಸಂತೋಷದಿಂದ ಋಷಿಗಳ ಹತ್ತಿರ ತಿರುಗಿ ಬಂದು ಅವರಿಗೆ ಆ ಮಂತ್ರವನ್ನು ಉಪದೇಶ ಮಾಡಿದನು. ಆ ಮಂತ್ರವನ್ನು ಯಾರಿಂದ ಕಲಿತೆ ಎಂದು ಋಷಿಗಳು ಕೇಳಿದರು. ಕಲ್ಯಾಣನು ಅದಕ್ಕೆ ಉತ್ತರ ಕೊಡಲಿಲ್ಲ. ಅವನು ತಪಸ್ಸು ಮಾಡಿ ಆ ಮಂತ್ರವನ್ನು ಪಡೆದಿರಬೇಕೆಂದು ಋಷಿಗಳು ಭಾವಿಸಿದರು.

ಕಲ್ಯಾಣನು ದಾರಿ ತೋರಿಸುತ್ತಾ ಸಾಗಲು, ಋಷಿಗಳು ಮಂತ್ರ ಜಪಿಸುತ್ತಾ ಸ್ವರ್ಗ ದ್ವಾರವನ್ನು ಸಮೀಪಿಸಿದರು. ಸ್ವರ್ಗದ ದ್ವಾರಗಳು ತೆರೆದುಕೊಂಡುವು. ಕಲ್ಯಾಣನೊಬ್ಬನ ಹೊರತು ಉಳಿದವರೆಲ್ಲ ಸ್ವರ್ಗ ದ್ವಾರದೊಳಗೆ ಪ್ರವೇಶಿಸಿದರು. ಕೂಡಲೇ ಸ್ವರ್ಗ ದ್ವಾರಗಳು ಮುಚ್ಚಿಕೊಂಡುವು.

ತನಗೆ ಉಪಕಾರ ಮಾಡಿದ ಗಂಧರ್ವನ ಹೆಸರನ್ನು ಹೇಳದೆ, ಅವನ ಮೇಲೆ ತೋರಿಸಬೇಕಾದ ಕೃತಜ್ಞತೆ ತೋರಿಸದೆ ಹೋದುದರಿಂದಲೇ ಕಲ್ಯಾಣ ಋಷಿಗೆ ಅರ್ಹತೆಯಿದ್ದೂ ಸ್ವರ್ಗ ತಪ್ಪಿತು.





# ರಾಜ ಲಕ್ಷಣ

**ಭ**ದ್ರಾವತಿ ರಾಜ್ಯವನ್ನು ಪಾಲಿಸಿಕೊಂಡಿದ್ದ ವಿಕ್ರಮಸೇನ ರಾಜನಿಗೆ ವಿಜಯ ಮತ್ತು ಅನಂತ ಎಂಬ ಇಬ್ಬರು ಕುಮಾರರಿದ್ದರು. ಅವರು ಅವಳಿ ಜವಳಿಗಳಾಗಿ ಹುಟ್ಟಿದವರು. ವಿಕ್ರಮಸೇನನು ಒಳ್ಳೆಯ ಬಲಪರಾಕ್ರಮಶಾಲಿಯಾದ ರಾಜನಾಗಿದ್ದನು. ಅಲ್ಲದೆ ಒಳ್ಳೆಯ ಪರಿಪಾಲನಾ ದಕ್ಷತೆಯುಳ್ಳವನು. ರಾಜ್ಯದೊಳಗೆ ಎಲ್ಲಿಯೂ ಅತೃಪ್ತಿಯ ವಾತಾವರಣ ವಿರಲಿಲ್ಲ. ಪ್ರಜೆಗಳು ಸುಖಶಾಂತಿಗಳಿಂದ ಜೀವಿಸಿ ಕೊಂಡಿದ್ದರು. ತಮ್ಮ ರಾಜನ ಮೇಲೆ ಪ್ರಜೆಗಳಿಗೆ ಒಳ್ಳೆಯ ಅಭಿಮಾನವಿದ್ದಿತು.

ತನ್ನ ಅನಂತರ ಭದ್ರಾವತೀ ರಾಜ್ಯದ ಸಿಂಹಾಸನ ವೇರುವವನು, ತನ್ನ ಒಳ್ಳೆಯ ಕೀರ್ತಿಯನ್ನು ನಿಲ್ಲಿಸುವವನಾಗಿರಬೇಕೆಂದುಕೊಂಡು ವಿಕ್ರಮಸೇನನು ಇಬ್ಬರು ಕುಮಾರರನ್ನೂ ಒಳ್ಳೆಯ ಕ್ರಮಶಿಕ್ಷಣದಲ್ಲಿ ಬೆಳೆಯಿಸಿದನು. ಒಳ್ಳೆಯ ಗುರುಗಳನ್ನು ನಿಯಮಿಸಿ ರಾಜೋಚಿತವಾದ ಎಲ್ಲಾ ವಿದ್ಯೆಗಳೂ ಬರುವ ಹಾಗೆ ಮಾಡಿದ್ದನು.

ವಿಜಯನು ಚುರುಕುತನವುಳ್ಳವನು. ಬಿಲ್ಲು ವಿದ್ಯೆಯಲ್ಲಿ ಅತ್ಯಂತ ನಿಪುಣನು. ಸಕಲ ಶಾಸ್ತ್ರಗಳನ್ನೂ ಚೆನ್ನಾಗಿ ಅಭ್ಯಾಸ ಮಾಡಿದವನು. ಹೀಗೆ ತುಂಬಿದ ಕೊಡದಂತಹ ಅವನಲ್ಲಿ ಬಹಳ ವಿನಯವೂ ಇದ್ದಿತು. ಯಾವುದರಲ್ಲಿಯೂ ದುಡುಕುವವನಲ್ಲ. ಆವೇಶಕ್ಕೊಳಗಾಗುವವನಲ್ಲ. ಗಂಭೀರ ವ್ಯಕ್ತಿತ್ವವುಳ್ಳವನು.

ಅನಂತನು ವಿಜಯನಿಗೆ ತೀರ ವಿರುದ್ಧ ಗುಣದವನು. ಅವನಲ್ಲಿ ಚುರುಕುತನವೇನೋ ಬೇಕಾದಷ್ಟಿದ್ದಿತು. ಆದರೆ ಬಹು ಸಣ್ಣ ವಿಷಯಕ್ಕೆ ಕೂಡಾ ಉದ್ರೇಕಕ್ಕೆ ಒಳಗಾಗುತ್ತಿದ್ದನು. ತನ್ನ ಮಾತನ್ನು ಅಲ್ಲಗಳೆದವರನ್ನೂ, ತಾನು ಮಾಡಿದುದರಲ್ಲಿ ತಪ್ಪು ಹೇಳುವವರನ್ನೂ ಸಹಿಸಿಕೊಳ್ಳುವವನಲ್ಲ. ದುಡುಕಿ ಹೇಳಿಬಿಡುವನು.

ಕುಮಾರರಲ್ಲಿರುವ ಈ ಬಗೆಯ ವ್ಯತ್ಯಾಸವು ವಿಕ್ರಮಸೇನನಿಗೆ ಗೊತ್ತಿದ್ದಿತು. ಅವಳಿಜವಳಿಗಳಾದ ಅವರಿಬ್ಬರಲ್ಲಿ ರಾಜ್ಯಪಾಲಕನಾಗಿರಲು ಯಾರು ಸಮರ್ಥರೆಂದು ಆಲೋಚಿಸಿಕೊಂಡೇ ಇದ್ದನು. ಆಮೇಲೆ ಏನೋ ಒಂದು ನಿರ್ಣಯಕ್ಕೆ ಬಂದು, ಇಪ್ಪತ್ತು ವಯಸ್ಸಿನ ಇಬ್ಬರು ಕುಮಾರರನ್ನೂ ಒಂದು ವರ್ಷದ ವರೆಗೆ ರಾಜ್ಯದೊಳಗಿನ ಎಲ್ಲಾ

ಐ. ಜಾನಕೀರಾಮು



ಪ್ರಾಂತಗಳಲ್ಲಿಯೂ ತಿರುಗಿ ಬರುವಂತೆ ಹೇಳಿ ಕಳುಹಿಸಿದನು. ತಿರುಗುವಾಗ ಕಂಡ ಅನುಭವಗಳನ್ನು ಹೇಳಬೇಕೆಂದು ಕೂಡಾ ಹೇಳಿದ್ದನು.

ಅದರಂತೆ ಅಣ್ಣ ತಮ್ಮಂದಿರಿಬ್ಬರೂ, ಸೈನಿಕರಾರನ್ನೂ ಕರೆದುಕೊಳ್ಳದೆ ಕಾಲುನಡಿಗೆಯಿಂದ ಹೊರಟರು.

ದೇಶದೊಳಗಿನ ಹಳ್ಳಿಗಳನ್ನೂ, ಪಟ್ಟಣಗಳನ್ನೂ ಸಂದರ್ಶಿಸುತ್ತ, ತಂದೆ ಹೇಳಿದ ಒಂದು ವರ್ಷದ ಗಡು ಮುಗಿಯುತ್ತಾ ಬರುವಾಗ, ರಾಜ್ಯದ ಸರಿಹದ್ದಿನಲ್ಲಿದ್ದ ಒಂದು ಅಡವಿಯನ್ನು ಸೇರಿದರು. ನಡು ಮಧ್ಯಾಹ್ನದ ಹೊತ್ತಿನಲ್ಲಿ ಅವರು ಅಲ್ಲಿದ್ದೊಂದು ಮಹಾವೃಕ್ಷದ ಕೆಳಗೆ ಕುಳಿತು ವಿಶ್ರಾಂತಿ ಪಡೆಯುತ್ತಿರಲು, ಸ್ವಲ್ಪ ಧೂರದಲ್ಲಿ ಒಂದು ಸ್ತ್ರೀ ಕಂಠದಿಂದ ಹೊರಡುವ "ಅಯ್ಯೋ! ಯಾರಿದ್ದೀರಯ್ಯಾ! ಕಾಪಾಡಿರಿ! ಕಾಪಾಡಿರಿ!" ಎಂಬ ಆರ್ತಸ್ವರವು ಕೇಳಿಸಿತು.

ವಿಜಯನೂ, ಅನಂತನೂ ಕೂಡಲೇ ಎದ್ದು ಆ ಕಡೆಗೆ ಓಡಿದರು. ಸುತ್ತಲೂ ಚಿಕ್ಕ ಚಿಕ್ಕ ಗಿಡಗಳೂ, ಬಳ್ಳಿಗಳೂ ಇದ್ದ ಕಾರಣದಿಂದ ಕಾಣದೆ ಹೋದ ಒಂದು ಹಳೆಯ ಬಾವಿಯೊಳಗಿನಿಂದ ಆ ಸ್ತ್ರೀಯ ಆರ್ತನಾದವು ಕೇಳಿಸುತ್ತಿತ್ತು. ಅವಳಿಗೆ ಎಂತಹ ಪೆಟ್ಟಾಗಿದೆಯೋ ಏನೋ?

ರಾಜಕುಮಾರರಿಬ್ಬರೂ ಗಿಡಬಳ್ಳಿಗಳನ್ನು ಆಚೀಚೆ ಸರಿಸಿ ಬಾವಿಯೊಳಗೆ ಬಗ್ಗಿ ನೋಡಿದರು. ಬಾವಿಯ ತಳದಲ್ಲಿ ಸ್ತ್ರೀಯೊಬ್ಬಳು ತಲೆಯೆತ್ತಿ ಅವರನ್ನು ನೋಡುತ್ತ, "ಈ ಹಾಳು ಬಾವಿಯೊಳಗೆ ಕಾಣದೆ ಬಿದ್ದುಬಿಟ್ಟೆ. ಹ್ಯಾಗಾದರೂ ನನ್ನನ್ನು ಕಾಪಾಡಿ ಪುಣ್ಯಕಟ್ಟಿಕೊಳ್ಳಿರಯ್ಯಾ!" ಎಂದಳು ದೀನ ಧ್ವನಿಯಿಂದ.

ಅವಳ ಅದ್ಭುತ ಸೌಂದರ್ಯವನ್ನು ನೋಡಿ ವಿಜಯನು ಮುಗ್ಧನಾದನು. ಅವನು ತಮ್ಮನ ಮುಖವನ್ನು ನೋಡಿದಾಗ, ಅವನು ಕೂಡಲೇ ಅಲ್ಲಿದ್ದ ಕಾಡು ಬಳ್ಳಿಗಳನ್ನು ಕತ್ತಿಯಿಂದ ಕಡಿದು, ಒಂದಕ್ಕೊಂದು ಕಟ್ಟಿ, ಒಂದು ಕೊನೆಯನ್ನು ಅಣ್ಣನ ಕೈಗೆ ಕೊಟ್ಟನು. ಇನ್ನೊಂದು ಕೊನೆಯನ್ನು ತಾನು ಹಿಡಿದುಕೊಂಡು ಬಾವಿಯೊಳಗೆ ಇಳಿದನು. ಅವನು ಆ ಸ್ತ್ರೀ ಕೈಗೆ ನಿಲುಕುವಷ್ಟು ಆಳದವರೆಗೆ ಇಳಿದು, ತನ್ನ ಕೈಯನ್ನು ಹಿಡಿಯುವಂತೆ ಅವಳಿಗೆ ಹೇಳಿದನು. ಹಾಗೆಯೇ ಅವಳು ಅವನ ಕೈಯನ್ನು ಹಿಡಿದು, ಕಾಲುಗಳನ್ನು ಬಾವಿಯ ಗೋಡೆಗೆ ಊರುಗೊಡುತ್ತ ಬಂದಳು. ಅವಳನ್ನು ಎತ್ತಿಕೊಂಡು ಬಾವಿಯಿಂದ ಮೇಲೆ ಬಂದನು ಅನಂತ.

ವಿಜಯನು ಅವಳನ್ನು ನೋಡಿ "ಯಾರು ನೀವು? ಒಂಟಿಯಾಗಿ ಈ ಸ್ಥಳಕ್ಕೆ ಏಕೆ ಬಂದಿರಿ?" ಎಂದು ಕೇಳಿದನು.

ಅದಕ್ಕೆ ಅವಳು, "ನಾನು ಕರವೀರಪುರದ ರಾಜನ ಮಗಳು. ಪಲ್ಲವಿ ಎಂದು ನನ್ನ ಹೆಸರು.

ನನ್ನ ಗೆಳತಿಯರೊಂದಿಗೆ ಕೂಡಿ ಈ ವನದಲ್ಲಿ ವಿಹರಿಸಲು ಬಂದೆನು. ಇಲ್ಲಿ ಅವರೊಂದಿಗೆ ಕಣ್ಣು ಮುಚ್ಚಾಲೆ ಆಡುತ್ತಾ, ಅವರಿಂದ ದೂರ ಓಡಿ ಬಂದೆನು. ಬಾವಿಯ ಗುರುತು ಗೊತ್ತಾಗದೆ, ಈ ಬಾವಿಯೊಳಗೆ ಬಿದ್ದೆನು. ನನ್ನ ಗೆಳತಿಯರು ನನ್ನನ್ನು ಹುಡುಕುತ್ತಾ ಇಲ್ಲಿಗೆ ಬಾರದಿರಲಿಕ್ಕಿಲ್ಲ" ಎಂದಳು.

ಅವಳು ಹೇಳಿ ಮುಗಿಸಿದಾಗಲೇ ಅವಳ ಗೆಳತಿಯ ರನೇಕರು ಬೇಗ ಬೇಗನೇ ಅಲ್ಲಿಗೆ ಬಂದರು.

ಆಗ ವಿಜಯನೂ ಅನಂತನೂ ತಾವು ಯಾರೆಂಬು ದನ್ನು ರಾಜಕುಮಾರಿಗೆ ಹೇಳಿದರು. ವಿಜಯನಿಗೆ ಅವಳನ್ನು ವಿವಾಹ ಮಾಡಿಕೊಳ್ಳಬೇಕೆಂಬ ಕಾಂಕ್ಷೆ ಯುಂಟಾಯಿತು. ಅನಂತನಿಗೆ ಕೂಡಾ ಅಂತಹ ಭಾವನೆಯೇ ಬಂದಿತು. ಅವಳಿಗೆ ಕೈಕೊಟ್ಟು ರಕ್ಷಿಸಿ ದವನು ತಾನೇ ಆದುದರಿಂದ ತಾನು ಅವಳನ್ನು ಮದುವೆಯಾಗುವುದೇ ಧರ್ಮವೆಂದುಕೊಂಡನು ತನ್ನೊಳಗೇ ಅನಂತ.

ಅಂತಲೇ ಅನಂತನು ಶಂಕಿಸದೆ ಪಲ್ಲವಿಯೊಂದಿಗೆ, ತನ್ನ ಮನಸ್ಸಿನಲ್ಲಿ ಉಂಟಾದ ಭಾವನೆಯನ್ನು ಹೇಳಿ ಬಿಟ್ಟನು. ವಿಜಯನು ಮಾತ್ರ ಏನೂ ಹೇಳದೆ ಮೌನವಾಗಿದ್ದನು. ಪಲ್ಲವಿ ತುಟಿದೆರೆದು ಏನೂ ಹೇಳದೆ, ವಿಜಯನನ್ನೊಮ್ಮೆ ನೋಡಿ ಗೆಳತಿಯ ರೊಂದಿಗೆ ಹೋಗಿಬಿಟ್ಟಳು.

ಒಂದು ವರ್ಷದ ಗಡುವಿನ ಕಾಲ ಮುಗಿದು ಇಬ್ಬರು ರಾಜಕುಮಾರರೂ ರಾಜಧಾನಿಗೆ ತಿರುಗಿ ಬಂದರು. ಇಬ್ಬರೂ ತಂದೆಯೊಂದಿಗೆ ದೇಶಾಟನೆಯ ಕಾಲದಲ್ಲಿ ತಮಗಾದ ಅನುಭವಗಳನ್ನು ಹೇಳಿ, ರಾಜ ಕುಮಾರಿ ಪಲ್ಲವಿಯ ಮೇಲೆ ತಮಗೆ ಉಂಟಾದ ಇಷ್ಟವನ್ನೂ ತಿಳಿಯಪಡಿಸಿದರು.

ಅವನ್ನು ಕೇಳಿ ವಿಕ್ರಮಸೇನನು ಆಶ್ಚರ್ಯಪಟ್ಟು, ಕುಮಾರರನ್ನು ನೋಡಿ, "ಕರವೀರಪುರದ ರಾಜ ಕುಮಾರಿ ನಿಮ್ಮಿಬ್ಬರಲ್ಲಿ ಯಾರ ಮೇಲೆ ಇಷ್ಟ



ಪಟ್ಟಿರುವಳೋ, ಅಥವಾ ನಿಮ್ಮಿಬ್ಬರಲ್ಲಿ ಒಬ್ಬರ ಮೇಲೆ ಕೂಡಾ ಇಷ್ಟವಾಗಿಲ್ಲದವಳೋ ಗೊತ್ತಾಗ ಲಿಲ್ಲ. ಆ ರಾಜ್ಯವು ಬಹಳ ಕಾಲದಿಂದ ನಮ್ಮ ಮಿತ್ರ ರಾಜ್ಯವಾಗಿದೆ. ರಾಜಕುಮಾರಿಯನ್ನು ಇಲ್ಲಿಗೆ ಆಹ್ವಾನಿಸಿ, ಸಂಗತಿ ಸಂದರ್ಭಗಳನ್ನು ತಿಳಿದುಕೊಳ್ಳ ಬೇಕು. ಹಾಗೆಯೇ ಮಾಡುತ್ತೇನೆ" ಎಂದನು.

ಅನಂತರ ಒಂದು ವಾರದೊಳಗೆ ಭದ್ರಾವತಿ ರಾಜ್ಯದ ಮಂತ್ರಿ ಕರವೀರಪುರಕ್ಕೆ ಹೋಗಿ, ತಮ್ಮ ರಾಜನ ಅಭಿಲಾಷೆಯನ್ನು ಹೇಳಿ, ಪಲ್ಲವಿಯನ್ನೂ ಅವಳ ತಂದೆಯನ್ನೂ ಕರೆದುಕೊಂಡು ಬಂದನು.

ವಿಜಯ, ಅನಂತ ಮತ್ತು ಇಬ್ಬರು ರಾಜರ ಸಮಕ್ಷಮದಲ್ಲಿ ಮಂತ್ರಿ ಪಲ್ಲವಿಯೊಂದಿಗೆ, ರಾಜ ಕುಮಾರರ ಕೋರಿಕೆಗಳನ್ನು ಹೇಳಿ, "ಅಮ್ಮಾ ಪಲ್ಲವೀ, ನಮ್ಮ ಮಹಾರಾಜರ ಕುಮಾರರಲ್ಲಿ ಯಾವನನ್ನಾದರೂ ವರಿಸಲು ನೀನು ಇಷ್ಟಪಡು ವಿಯಾ?" ಎಂದು ಕೇಳಿದನು.

ಪಲ್ಲವಿ ಇಷ್ಟವಿದೆ ಎಂಬಂತೆ ತಲೆಯಾಡಿಸಿದಳು. ಕೂಡಲೇ ಮಂತ್ರಿ ಅವಳ ಕೈಗೆ ಒಂದು ಹೂವಿನ ಮಾಲೆಯನ್ನು ಕೊಟ್ಟನು.

ಅದನ್ನು ನೋಡಿದ ಕೂಡಲೇ ಅನಂತನು ಮುಗುಳುನಗುತ್ತಾ, "ಮಹಾಮಂತ್ರೀ, ರಾಜ ಕುಮಾರಿ ನಮ್ಮಿಬ್ಬರಲ್ಲಿ ಯಾರನ್ನು ವರಿಸುವಳೆಂಬ ಸಂಶಯ ನಿಮಗೆ ಬರಬೇಕಾಗಿದ್ದಿಲ್ಲ. ನಾನು ಅವಳನ್ನು ಪ್ರಾಣಾಪಾಯದಿಂದ ಕಾಪಾಡಿದವನು. ಅಂತಹ ನನ್ನನ್ನಲ್ಲದೆ ಅವಳು ಬೇರೆ ಯಾರನ್ನು ವರಿಸುವಳೆಂದು ಕೊಂಡಿರಿ ?" ಎಂದನು.

ಪಲ್ಲವಿ ತಲೆತಗ್ಗಿಸಿಕೊಂಡು ಮುಗುಳು ನಗುವಿ ನೊಂದಿಗೆ ಮುಂದೆ ಬಂದು ಹೂವಿನ ಮಾಲೆ ಯನ್ನು ವಿಜಯನ ಕೊರಳಿಗೆ ಹಾಕಿದಳು.

ವಿಜಯನು ಮುಗುಳು ನಗುತ್ತ ಸುಮ್ಮನಿದ್ದನು. ಪಲ್ಲವಿ ತಲೆಯೆತ್ತಿ ಅನಂತನ ಮುಖವನ್ನು ನೋಡುತ್ತ, "ನಿಮ್ಮ ಅಣ್ಣನ ಕಣ್ಣು ಸನ್ನೆಯಂತೆ ನಡೆಯುವ ನೀವು, ಇವರ ಆದೇಶದಂತೆ ನನ್ನನ್ನು ಪಾಳುಬಿದ್ದ ಬಾವಿಯಿಂದ ಕಾಪಾಡಿದ್ದೀರಿ. ನಿಮ್ಮ ಕೃತಿಗಳಿಂದ ನನಗೆ ಸೀತಾದೇವಿಯ ರಕ್ಷಣೆಯ ಮೇಲೆ ಲಕ್ಷ್ಮಣನು ತೋರಿಸಿದ ಭಕ್ತಿಶ್ರದ್ಧೆಗಳು ಕಂಡುವೇ ಹೊರತು ಬೇರೆ ಭಾವನೆ ಕಾಣಲಿಲ್ಲ. ತುಂಬಿದ ಗಾಂಭೀರ ಭಾವದ ನಿಮ್ಮ ಅಣ್ಣಯ್ಯ ನನ್ನ ಮನಸ್ಸಿನೊಳಗೆ ಆಗಲೇ ಹೊಕ್ಕು ಹೃದಯದಲ್ಲಿ ಪ್ರತಿಷ್ಠಿಸಿದರು" ಎಂದಳು.

ಅನಂತನು ಕ್ಷಣಕಾಲ ತಲೆತಗ್ಗಿಸಿ, ಅನಂತರ ಪಲ್ಲವಿಯನ್ನು ನೋಡುತ್ತ, "ಅತ್ತಿಗೇ, ನೀವು ಸೀತಾಲಕ್ಷ್ಮಣರ ಪ್ರಸಕ್ತಿ ತೆಗೆದು ನನ್ನಲ್ಲಿ ಪೇರಿಕೊಂಡಿದ್ದ ಅಹಂಭಾವಕ್ಕೆ, ದುಡುಕುತನಕ್ಕೆ ಅತ್ಯುತ್ತಮ ಚಿಕಿತ್ಸೆ ಮಾಡಿದಿರಿ. ಅಣ್ಣಯ್ಯನದು ಸಹಜವಾದ ರಾಜಠೀವಿ. ನನ್ನದು ಕೃತ್ರಿಮವೇ ನಿಜ. ಕಡತಂದುಕೊಳ್ಳುವ ರಾಜಭಾವ ನನ್ನದು. ಈ ನಿಜವನ್ನು ತಿಳಿಯಪಡಿಸಿದುದನ್ನು ಎಂದೂ ಮರೆಯಲಾರೆ" ಎಂದು ತಲೆಬಗ್ಗಿ ನಮಸ್ಕಾರ ಮಾಡಿದನು.

ಇದನ್ನೆಲ್ಲ ಗಮನಿಸುತ್ತಿದ್ದ ವಿಕ್ರಮ ಸೇನನಿಗೆ ಒಂದು ಸತ್ಯವು ಗೊತ್ತಾಯಿತು. ರಾಜನು ಶೂರ ನಾಗಿ ಮೇಧಾವಿಯಾಗಿರಬೇಕಾದುದು ಎಷ್ಟು ಆಗತ್ಯವೋ, ಕೋಪ ತಾಪ ವಾಗಾಡಂಬರಗಳಿಲ್ಲದೆ ತನ್ನ ಪರಿವಾರದವರಿಂದ ಸುಗಮವಾಗಿ ಕೆಲಸ ಮಾಡಿಸಬೇಕಾದುದೂ ಮುಖ್ಯವೇ. ಈ ಲಕ್ಷಣ ಗಳು ತನ್ನ ಕುಮಾರನಾದ ವಿಜಯನಲ್ಲೇ ಇವೆ.

ಕೆಲವು ದಿನಗಳ ಮೇಲೆ ವಿಕ್ರಮಸೇನನು ವಿಜಯ ನಿಗೆ ಪಟ್ಟಾಭಿಷೇಕ ಮಾಡಿ, ಪಲ್ಲವಿಯೊಂದಿಗೆ ಅವನ ವಿವಾಹವನ್ನೂ ವೈಭವದಿಂದ ಮಾಡಿಸಿದನು.





# ಹೊಸ ನ್ಯಾಯಾಧಿಕಾರಿ

ಹಿಂದಿನ ಒಂದು ಕಾಲದಲ್ಲಿ ವಿಂಧ್ಯಾರಣ್ಯದ ಪರಿಸರಗಳಲ್ಲಿದ್ದ ವ್ಯವಸಾಯಕ್ಕೆ ಯೋಗ್ಯವಾದ ಭೂಮಿ, ಕೆಲವು ಮಂದಿ ಆಸ್ತಿವಂತರ ಹಕ್ಕು ಭುಕ್ತಿಗಳಿಗೆ ಒಳಗಾಗಿದ್ದಿತು. ಅವರು ರಾಜನಿಗೆ ಪ್ರತಿ ವರ್ಷವೂ ಸ್ವಲ್ಪ ಧನವನ್ನು ಕಪ್ಪವಾಗಿ ಸಲ್ಲಿಸುತ್ತ ತಮ್ಮ ಅಧೀನದಲ್ಲಿರುವ ಪ್ರಜೆಗಳ ಮೇಲೆ ಸರ್ವಾಧಿಕಾರವನ್ನೂ ಚಲಾಯಿಸಿಕೊಂಡಿದ್ದರು. ಪ್ರಜೆಗಳು ಕೂಡಾ ತಮ್ಮ ತಮ್ಮ ಒಡೆಯರಿಗೆ ವಿಧೇಯರಾಗಿ ಹೇಳಿದಂತೆ ಕೇಳಿಕೊಂಡಿದ್ದರು.

ಆ ಭೂಸ್ವಾಮಿಗಳ ಸೇವೆಯಲ್ಲಿ ಕೆಲವು ಮಂದಿ ಸೈನಿಕರು ಕೂಡಾ ಇದ್ದರು. ಅವರಿಗೆ ಒಡೆಯನೇ ಸೇನಾನಾಯಕನು. ಅವನಿಗೆ ಅವನೇ ಮಂತ್ರಿ ಕೂಡಾ. ಅಂತಹ ಒಡೆಯರಿಗೆ ವಿದ್ಯಾಗಂಧವೇನಿಲ್ಲದಿದ್ದರೂ ಪ್ರಜೆಗಳಿಗೆಲ್ಲ ಅವರೇ ಗುರುಗಳಂತೆ, ಧರ್ಮ ಬೋಧಕರಂತೆ ಪ್ರವರ್ತಿಸುತ್ತಿದ್ದರು.

ಅಂತಹ ಭೂಸ್ವಾಮಿಗಳಲ್ಲಿ ಒಬ್ಬನ ಹೆಸರು ನಾಗಚೂಡಾಮಣಿ ಮಹಾ ಭೂಸ್ವಾಮಿ. ಒಂದು ಸಾರಿ ಅವನಿರುವ ಊರಿನಲ್ಲಿ, ಬಹಳ ಕಾಲದಿಂದ ನ್ಯಾಯಾಧಿಕಾರಿಯಾಗಿದ್ದವನು ತೀರಿಹೋದನು. ಆ ಮೇಲೆ ನಾಗಚೂಡಾಮಣಿಗೆ ತಾನೇ ನ್ಯಾಯಾಧಿಕಾರಿಯಾಗಿ ವ್ಯವಹರಿಸಬೇಕೆಂಬ ಬುದ್ಧಿ ಹುಟ್ಟಿತು. ಕೂಡಲೇ ತಾನೇ ನ್ಯಾಯಾಧಿಕಾರಿಯಾಗಿರುವೆನೆಂದು ಊರೊಳಗೆಲ್ಲಾ ಡಂಗುರ ಸಾರಿಸಿದನು.

ಆದರೆ ಅಪರಾಧಿಗಳಿಗೆ ದೊಡ್ಡ ದೊಡ್ಡ ಶಿಕ್ಷೆ ಮತ್ತು ಮರಣ ದಂಡನೆಗಳನ್ನು ನೀಡಬಲ್ಲ ನ್ಯಾಯಾಧಿಕಾರಿಯ ಸ್ಥಾನವನ್ನು ರಾಜನು ಒಪ್ಪಿಕೊಳ್ಳಬೇಕೆಂಬ ವಿಧಿಯಿದ್ದಿತು.

ನಾಗಚೂಡಾಮಣಿ ತಾನು ನ್ಯಾಯಾಧಿಕಾರಿ ಎಂದು ಪ್ರಕಟಿಸಿಕೊಂಡ ಸಮಯದಲ್ಲಿ, ರಾಜನು ದೇಶ ಪರ್ಯಟನೆ ಮಾಡುತ್ತ ಅವನಿರುವ ಊರಿಗೇ ಬಂದನು. ಭೂಸ್ವಾಮಿ ನಾಗಚೂಡಾಮಣಿ ಆಗ ಒಂದು ಅಪರಾಧವನ್ನು ವಿಚಾರಿಸಿಕೊಂಡಿದ್ದನು. ಅಕ್ಕಪಕ್ಕದ ಗ್ರಾಮದವರಿಬ್ಬರು ಅವನ ಮುಂದೆ ನಿಂತಿದ್ದರು. ಅವರಲ್ಲಿ ಒಬ್ಬನ ಮೂಗು ಯಾರೋ ಕೊಯ್ದಂತೆ ಅರ್ಧಮೂಗಿನ ಭಾಗ ತುಂಡಾಗಿ ಹೋಗಿತ್ತು.

ಆಗಲೇ ರಾಜನು ಬಂದು ನಾಗಚೂಡಾಮಣಿಯ ಪಕ್ಕದಲ್ಲಿ ಉನ್ನತಾಸನದ ಮೇಲೆ ಕುಳಿತನು. ಪಕ್ಕದಲ್ಲಿ

ಕೆ. ರಮಾವತಿ



ರಾಜನು ಕುಳಿತುದರಿಂದ ನಾಗಚೂಡಾಮಣಿ ನ್ಯಾಯ ವಿಚಾರಣೆಗೆ ಏನೋ ತಡೆ ಬಂದಂತಾಗಿ ಆಗಾಗ ಆಚೀಚೆ ನೋಡುತ್ತಿದ್ದನು. "ಇನ್ನೊಮ್ಮೆ ಹೇಳು, ನಿಜವನ್ನು ಮರೆಮಾಜದೆ ಹೇಳು. ಏನಾಯಿತು ನಿನ್ನ ಮೂಗಿಗೆ ?" ಎಂದು ಗ್ರಾಮಸ್ಥನನ್ನು ನೋಡಿ ಕೇಳಿದನು ನಾಗಚೂಡಾಮಣಿ.

ಅವನು ತನ್ನ ಪಕ್ಕದಲ್ಲಿರುವವನನ್ನು ತೋರಿಸುತ್ತ, "ಅಯ್ಯಾ, ಇವನು ನನ್ನ ಮೂಗನ್ನು ಕಚ್ಚಿ ಕೊಯ್ದುಬಿಟ್ಟನು" ಎಂದನು.

"ನೀನೇಕೆ ಅವನ ಮೂಗನ್ನು ಕಚ್ಚಿಕೊಯಿದೆ ?" ಎಂದು ನಾಗಚೂಡಾಮಣಿ ಎರಡನೆಯವನನ್ನು ದಬಾಯಿಸಿ ಕೇಳಿದನು.

"ಅಯ್ಯಾ, ಅವನು ಸುಳ್ಳು ಹೇಳುತ್ತಾನೆ. ನಾನು ಅವನ ಮೂಗು ಕಚ್ಚಲಿಲ್ಲ. ಅವನೇ ಕಚ್ಚಿಕೊಂಡು ದೂರು ಹೇಳುತ್ತಾನೆ" ಎಂದನು ಎರಡನೆಯವನು.

"ಅದು ಹೇಗೆ ಸಾಧ್ಯ ? ಯಾರಿಗಾದರೂ ತನ್ನ ಬಾಯಿಯ ಹಲ್ಲಿನಿಂದ ತನ್ನ ಮೂಗನ್ನು ಕಚ್ಚಲು ಸಾಧ್ಯವೆ ?" ಎಂದನು ನಾಗಚೂಡಾಮಣಿ.

ಅದಕ್ಕೆ ಆ ಎರಡನೆಯವನು, "ಸಾಧಾರಣವಾಗಿ ಅದು ಸಾಧ್ಯವಾಗುವುದಿಲ್ಲ ನಿಜ. ಅವನು ಒಂದು ಮುಕ್ಕಾಲಿಗೆಯ ಮೇಲೆ ನಿಂತುಕೊಂಡು ಅದನ್ನು ಸಾಧಿಸಿಕೊಂಡಿದ್ದಾನೆ" ಎಂದನು.

ನಾಗಚೂಡಾಮಣಿ ಪಕ್ಕದಲ್ಲಿ ಕುಳಿತು ಅದನ್ನೆಲ್ಲ ಶ್ರದ್ಧೆಯಿಂದ ಗಮನಿಸುತ್ತಿದ್ದ ರಾಜನನ್ನು ನೋಡಿದನು. ರಾಜನಿಗೆ ವೃಥಾ ಕಾಲಹರಣವಾಗದಂತೆ ಬೇಗನೇ ನ್ಯಾಯನಿರ್ಣಯ ಮಾಡಬೇಕೆಂದುಕೊಂಡು ನಾಗಚೂಡಾಮಣಿ. "ಹೌದು ಹೌದು. ಇವನು ಹಾಗೇ ಮಾಡಿರಬೇಕು. ಇವನಿಗೆ ನ್ಯಾಯಾಧಿಕಾರಿಯಾದ ನನ್ನ ಮುಂದೆ ಸುಳ್ಳು ಹೇಳಿದುದಕ್ಕೆ ನಲುವತ್ತು ಕೊರಡೇ ಏಟುಗಳ ಶಿಕ್ಷೆ ವಿಧಿಸುತ್ತೇನೆ" ಎಂದು ಹೇಳಿ ರಾಜನೊಂದಿಗೆ, "ಪ್ರಭೂ, ಭೋಜನದ ವೇಳೆಯಾಯಿತು, ದಯಮಾಡೋಣವಾಗಲಿ !" ಎಂದು ಭೋಜನಶಾಲೆಯ ಕಡೆಗೆ ನಡೆದನು.

ಭೋಜನ ಮುಗಿದ ಮೇಲೆ ನಾಗಚೂಡಾಮಣಿ ಹೆಂಡತಿಯೊಂದಿಗೆ "ಈ ತೀರ್ಪಿನಲ್ಲಿ ಏನಾದರೂ ತಪ್ಪು ನಡೆದಿದೆಯೇ ?" ಎಂದು ಕೇಳಿದನು.

ಅವನ ಹೆಂಡತಿ ತುಸುಕೋಪದಿಂದ, "ನೀವು ಥೇಟು ಮೂರ್ಖರ ಹಾಗೆ ವ್ಯವಹರಿಸಿದ್ದೀರಿ. ಇದೋ, ಈ ಮುಕ್ಕಾಲು ಪೀಠದ ಮೇಲೆ ನಿಂತು ನಿಮ್ಮ ಮೂಗನ್ನು ಕಚ್ಚಿಕೊಳ್ಳುವ ಪ್ರಯತ್ನ ಮಾಡಿರಿ. ಗೊತ್ತಾಗುತ್ತೆ" ಎಂದಳು.

ನಾಗಚೂಡಾಮಣಿ ಹಾಗೆಯೇ ನಿಂತು ಪ್ರಯತ್ನ ಮಾಡಿ, ಸಾಧ್ಯವಾಗದೆ, "ಈಗ ನಾನು ಏನು ಮಾಡಬೇಕು ? ಮಹಾರಾಜರು ನನ್ನ ಬುದ್ಧಿವಂತಿಕೆಯನ್ನು ಕುರಿತು ಏನೆಂದುಕೊಂಡಾರು ?" ಎಂದನು ಚಿಂತೆಯಿಂದ.

"ಇನ್ನೊಂದುಸಾರಿ ಅದರ ನ್ಯಾಯ ವಿಚಾರಣೆ ನಡೆಸಿರಿ. ಈಸಾರಿ ಆ ಎರಡನೇ ಗ್ರಾಮಸ್ಥನಿಗೆ ಕೊರಡೇ ಏಟು ಶಿಕ್ಷೆ ಕೊಡಿಸಿರಿ" ಎಂದು ಹೆಂಡತಿ ಸಲಹೆ ಮಾಡಿದಳು.

ರಾಜನ ಅನುಮತಿಯಿಂದ ನಾಗಚೂಡಾಮಣಿ ಆದಿನ ಸಾಯಂಕಾಲ ಮತ್ತೊಂದುಸಾರಿ ಅದೇ ಅಪರಾಧದ ವಿಚಾರಣೆಯನ್ನು ಪ್ರಾರಂಭಿಸಿದನು. ಆದರೆ ಏನು ನಡೆಯಿತೆಂದರೆ, ಅಷ್ಟು ಹೊತ್ತಿಗೆ ಮೊದಲನೇ ಗ್ರಾಮಸ್ಥನು ನಲುವತ್ತು ಕೊರಡೇ ಏಟುಗಳನ್ನು ತಿಂದು ಮುಗಿದಿತ್ತು.

ನಾಗಚೂಡಾಮಣಿ ತನ್ನ ತೀರ್ಪನ್ನು ಬದಲಾಯಿಸುತ್ತ, ಎರಡನೇ ಗ್ರಾಮಸ್ಥನಿಗೆ ತಕ್ಕ ಶಿಕ್ಷೆ ಕೊಡಬೇಕೆಂದುಕೊಂಡನು.

ಆಗ ಅವನ ಹೆಂಡತಿ ಇದಿರಿನಲ್ಲಿದ್ದ ತೆರೆಯ ಮರೆಯಲ್ಲಿ ನಿಂತುಕೊಂಡು, ತನ್ನ ಗಂಡ ಮತ್ತೆ ತಪ್ಪು ಮಾಡದಂತೆ ನೋಡಬೇಕೆಂಬ ಆತುರದಲ್ಲಿ, ಗಂಡನಿಗೆ ನಾಲ್ಕು ಬೆರಳುಗಳನ್ನು ತೋರಿಸಿದಳು. ಅವಳ ಉದ್ದೇಶ ನಲುವತ್ತು ಕೊರಡೇ ಏಟುಗಳ ಶಿಕ್ಷೆ ವಿಧಿಸಿರೆಂಬುದಾಗಿತ್ತು.

ಅದನ್ನು ಗಮನಿಸಿದ ನಾಗಚೂಡಾಮಣಿ ಸೇವಕನೊಂದಿಗೆ, "ಇವನಿಗೆ ನಾಲ್ಕು ಕೊರಡೇ ಏಟುಗಳ ಶಿಕ್ಷೆ ವಿಧಿಸುತ್ತೇನೆ" ಎಂದನು.

ನಾಗಚೂಡಾಮಣಿಯ ಹೆಂಡತಿ ತನ್ನೊಳಗೇ ಚಡಪಡಿಸಿದಳು. ತನ್ನ ಗಂಡ ಮತ್ತೆ ಪರಮ ಮೂರ್ಖನ ಹಾಗೆ ಪ್ರವರ್ತಿಸಿದನೆಂಬ ಕೋಪದಲ್ಲಿ ಗಟ್ಟಿಯಾಗಿ ಹಲ್ಲು ಕಡಿದುಕೊಂಡಳು.

ಅದನ್ನು ನೋಡಿ ನಾಗಚೂಡಾಮಣಿ ತನ್ನ ಹೆಂಡತಿ ಅವನ ಮೂಗನ್ನು ಕಚ್ಚಬೇಕೆನ್ನುವಳೆಂದುಕೊಂಡು ಸೇವಕನೊಂದಿಗೆ, "ಕೊರಡೇ ಏಟುಗಳಲ್ಲ, ಅವನ ಮೂಗನ್ನು ಕಚ್ಚಿ ತುಂಡುಮಾಡು" ಎಂದನು.

ನಾಗಚೂಡಾಮಣಿಯ ಹೆಂಡತಿ ಗಾಬರಿಯಾಗಿ ಆ ಶಿಕ್ಷೆಯನ್ನು ನಿಲ್ಲಿಸುವಂತೆ ಕೈಸನ್ನೆ ಮಾಡಿದಳು. ಅದನ್ನು ನೋಡಿ ಅವಳೇ ಅವನ ಮೂಗನ್ನು ಕಚ್ಚಬೇಕೆಂದಿರುವಳೆಂದು ಭಾವಿಸಿ ನಾಗಚೂಡಾಮಣಿ ಸೇವಕನಿಗೆ "ಲೋ ಸ್ವಲ್ಪ ನಿಲ್ಲು. ನನ್ನ ಹೆಂಡತಿಯೇ ಅವನ ಮೂಗನ್ನು ಕಚ್ಚಿ ತೆಗೆಯುತ್ತಾಳೆ" ಎಂದನು.

ಇದನ್ನೆಲ್ಲ ನೋಡಿ ರಾಜನು ಹೊಟ್ಟೆ ಹುಣ್ಣಾಗುವಂತೆ ನಕ್ಕನು. ಆಮೇಲೆ ರಾಜನು ಅಲ್ಲಿಂದ ಹೊರಟುಹೋಗುತ್ತ, "ನಾಗಚೂಡಾಮಣಿ, ನೀನು ನ್ಯಾಯಾಧಿಕಾರಿಯಾಗಿರುವುದಕ್ಕಿಂತ ನನ್ನ ಸಭೆಯಲ್ಲಿ ವಿದೂಷಕನಾಗಿದ್ದರೆ ಚೆನ್ನಾಗಿರುತ್ತದೆ. ಇಲ್ಲಿ ನ್ಯಾಯಾಧಿಕಾರಿ ಪದವಿಗೆ ಇನ್ನೊಬ್ಬನನ್ನು ಕಳುಹಿಸುತ್ತೇನೆ" ಎಂದನು.



# ಹಣೆಬರೆಹ

**ಶೇ**ಷಪ್ಪನೆಂಬ ಒಬ್ಬ ಸಣ್ಣ ರೈತನಿಗೆ ಜ್ಯೋತಿಷ್ಯದಲ್ಲಿ ಸ್ವಲ್ಪವೂ ನಂಬುಗೆ ಇರಲಿಲ್ಲ. ಆದರೆ ಅವನ ಹೆಂಡತಿ ಪೂರ್ಣಿಮೆಗೆ ಮಾತ್ರ ಜ್ಯೋತಿಷ್ಯದ ಮೇಲೆ ವಿಪರೀತವಾದ ಅಭಿಮಾನ.

ವಯಸ್ಸು ತುಂಬಿ ಎಷ್ಟು ದಿನಗಳುರುಳುತ್ತಿದ್ದರೂ ತನ್ನ ಮಗಳಿಗೆ ವಿವಾಹದ ಯೋಗ ಕೂಡಿಬಾರದೆ ಹೋದುದರಿಂದ ಪೂರ್ಣಿಮಾ ಬಹಳ ಚಿಂತೆ ಮಾಡಿಕೊಂಡಿದ್ದಳು.

ಪಕ್ಕದ ಊರಿನಲ್ಲಿ ಒಬ್ಬ ಜ್ಯೋತಿಷ್ಯನಿರುವನೆಂದು ಅವಳಿಗೆ ತಿಳಿಯಿತು. "ಆ ಜ್ಯೋತಿಷ್ಯರ ಹತ್ತಿರ ಹೋಗಿ ನಮ್ಮ ಹುಡುಗಿಯ ಮದುವೆ ಯಾವಾಗ ಆಗುತ್ತೆ ಅಂತ ತಿಳಿದುಕೊಂಡು ಬನ್ನಿ. ನಿಮ್ಮ ಮೇಲೆ ನನಗೆ ನಂಬುಗೆಯಿಲ್ಲ. ನಾನೂ ನಿಮ್ಮೊಂದಿಗೆ ಬರುತ್ತೇನೆ. ಹೊರಡೋಣ" ಎಂದು ಅವಳು ಗಂಡನೊಂದಿಗೆ ಹೇಳಿದಳು.

ಶೇಷಪ್ಪನು ಇಷ್ಟವಿಲ್ಲದೆ ಹೋದರೂ ಹೆಂಡತಿಯ ಒತ್ತಾಯದಿಂದಾಗಿ ಹೊರಟನು. ಪೂರ್ಣಿಮಾಳೂ ಹೊರಟಳು.

ಅವರು ಜ್ಯೋತಿಷ್ಯನ ಮನೆಯನ್ನು ತಲಪಿದಾಗ, ಒಬ್ಬಳು ಹುಡುಗಿ ಬಾಗಿಲು ತೆರೆದು, "ನಮ್ಮ ತಂದೆಯವರನ್ನು ನೋಡಲು ಬಂದಿದ್ದೀರಾ ? ಬನ್ನಿ, ಕೂಡಿ, ಈಗ ಬರುತ್ತಾರೆ" ಎಂದು ಹೇಳಿ ಒಳಗೆ ಹೋದಳು.

ಹೊರಗೆ ಬಂದ ಜ್ಯೋತಿಷ್ಯನಿಗೆ ಶೇಷಪ್ಪ ನಮಸ್ಕಾರ ಮಾಡಿ, "ಅಯ್ಯಾ, ವ್ಯತ್ಯಾಸವಾಗಿ ತಿಳಿದುಕೊಳ್ಳಬಾರದು. ಬಾಗಿಲು ತೆರೆದವಳು ನಿಮ್ಮ ಮಗಳು ತಾನೆ ? ಮದುವೆಯ ವಯಸ್ಸು ಮೀರಿದ ಹಾಗಿದೆ" ಎಂದನು ವಿನಯದಿಂದ.

ಜ್ಯೋತಿಷ್ಯನು ಕೈಮುಗಿದು "ಹೌದೌದು. ಎಲ್ಲಾ ಹಣೇ ಬರೆಹ. ಅವಳ ಹಣೆಯಲ್ಲಿ ಬ್ರಹ್ಮನು ವಿವಾಹದ ಘಳಿಗೆ ಯಾವಾಗ ಬರೆದಿದ್ದಾನೋ, ಆಗ ಆಗುತ್ತೆ ಬಿಡಿ" ಎಂದನು.

ಆ ಮಾತು ಕೇಳುತ್ತಲೇ ಪೂರ್ಣಿಮಾ "ಬಂದ ಕೆಲಸ ತೀರಿತು !" ಎಂದು ಹೇಳಿ ಕೂಡಲೇ ಅಲ್ಲಿಂದೆದ್ದಳು. ಶೇಷಪ್ಪನು ಅವಳನ್ನನುಸರಿಸಿ ನಡೆದನು.






## ೫

[ ಚಿತ್ರಸೇನಾದಿಗಳಿಗೆ ಉಗ್ರಾಕ್ಷನು ಔತಣ ಮಾಡಿಸಿದನು. ಆಗ ಜ್ವಾಲಾದ್ವೀಪದಿಂದ ಭಯಂಕರ ಪಕ್ಷಿಗಳ ಮೇಲೆ ಕ್ರೂರರು ಬರುವ ಸುದ್ದಿ ಗೊತ್ತಾಯಿತು. ಉಗ್ರಾಕ್ಷನು ಚಿತ್ರಸೇನಾದಿಗಳನ್ನು ಕರೆದುಕೊಂಡು ಕಾಡಿನೊಳಗೆ ಹೋದನು. ಅಲ್ಲಿ ಜ್ವಾಲಾದ್ವೀಪ ವಾಸಿಗಳೊಂದಿಗೆ ನಡೆದ ಹೋರಾಟದಲ್ಲಿ ಒಬ್ಬ ಶತ್ರು ಚಿತ್ರಸೇನನಿಂದ ಸತ್ತ. ಜ್ವಾಲಾದ್ವೀಪದವರು ಹಾರಿಹೋದರು. ಉಗ್ರಸೇನನ ಮೈಪೂರಾ ಗಾಯಮಯವಾಯಿತು. —ಇನ್ನು ಓದಿರಿ ]

ಉಗ್ರಾಕ್ಷನು ದೊಡ್ಡ, ದೊಡ್ಡ ಶ್ವಾಸಬಿಡುತ್ತ, ಸೇವಕರ ಆಧಾರದಲ್ಲಿ ಎದ್ದುನಿಂತು, ಗಾಯಗಳ ನೋವನ್ನು ಹಲ್ಲುಕಚ್ಚಿ ಸಹಿಸಿಕೊಳ್ಳುತ್ತ, ತನ್ನ ಶರೀರವನ್ನೆಲ್ಲಾ ನೋಡಿ ಹಾಗೆಯೇ ಇತರ ರಾಕ್ಷಸ ಗಾಯಾಳುಗಳನ್ನೂ ನೋಡಿದ.

ಆಮೇಲೆ ಗುಡ್ಡವು ಪ್ರತಿಧ್ವನಿಸುವಂತೆ ಒಂದು ಹೂಂಕಾರಮಾಡಿ, "ನೋಡಿದೆಯಾ ಚಿತ್ರಸೇನಾ! ಎಂತಹ ಮಹಾರಾಕ್ಷಸನಿಗೆ ಎಂಥಾ ದುರ್ಗತಿ! ಇಲ್ಲಿ ನಾಲ್ಕು ಸುತ್ತಲೂ ದೃಷ್ಟಿ ಹಾಯುವವರೆಗೂ ಇರುವ ಈ ಅರಣ್ಯ ಪ್ರದೇಶಕ್ಕೆಲ್ಲಾ ಏಕೈಕ ಪ್ರಭುವಾಗಿರುವವನು ನಾನು. ನನ್ನನ್ನು ಸಾಧಾರಣ ರಾಕ್ಷಸನೆಂದು ತಿಳಿಯಬೇಡ. ರಾಕ್ಷಸ ಜಾತಿಯಲ್ಲಿ ಬಹುದೊಡ್ಡ ಕೀರ್ತಿ ಪ್ರತಿಷ್ಠೆಗಳಿಸಿದ, ಬಲೀಂದ್ರನ ವಂಶದಲ್ಲಿ ಹುಟ್ಟಿದವನು. ಅಂತಹ ನಾನು ನನ್ನ ಅರಣ್ಯದ ಮಧ್ಯದಲ್ಲೇ ಪರದೇಶಗಳಿಂದ ಬಂದ ಕ್ಷುದ್ರ ಮಾನವರಿಂದ ಇಂಥಾ ಪೆಟ್ಟು ತಿಂದು ಬಿದ್ದೆನೆಂದರೆ ಏನು ಹೇಳಬೇಕು? ಆ ಕ್ರೂರ ನರ ಪಶುಗಳು ನನಗಿಂತ ಹೆಚ್ಚಿನ ಶಕ್ತಿಯುಳ್ಳವರೆನ್ನಲೆ? ಇಲ್ಲವೇ ಇಲ್ಲ! ಅವರು ವಿಧೇಯಪಡಿಸಿಕೊಂಡ ಆ ಪಕ್ಷಿಗಳಿಂದಲೇ ಹೀಗಾಯಿತು. ಅವ್ರ




"ರಾಕ್ಷಸಾಂತಕ ಪಕ್ಷಿಗಳೇ!" ಎಂದು ಹಲುಬಿಕೊಂಡನು.

ಚಿತ್ರಸೇನನು ಉಗ್ರಾಕ್ಷನಿಗೆ ಸಮಾಧಾನ ಹೇಳುವವನಂತೆ, "ಚಿಂತಿಸಬೇಡ ಉಗ್ರಾಕ್ಷಾ. ಗುಡ್ಡಕ್ಕೆ ಗುಡ್ಡ ಅಡ್ಡವಿದ್ದೇ ಇದೆ. ಅದನ್ನೇ ನೆನೆದು ಚಿಂತಿಸುವುದರಿಂದ ಲಾಭವೇನಿಲ್ಲವಷ್ಟೆ? ನೀನೂ ನಾನೂ ಇವತ್ತು ಸೋತುಹೋದದ್ದು ಆ ಜ್ವಾಲಾದ್ವೀಪದ ಮಾನವರಿಂದ ಅಲ್ಲವೆಂದು ತಿಳಿದೇ ಇದೆ. ಅವರು ಏರಿಕೊಂಡು ಬಂದ ಪಕ್ಷಿಗಳೇ ನಮಗೆ ಈ ಗತಿ ತಂದಿವೆ. ಅಂಥಾ ಯಾವು ಪಕ್ಷಿಗಳ ಮುಂದೆ ನಮ್ಮ ಹತ್ತಿರವಿರುವ ಈ ಆಯುಧಗಳೊಂದೂ ಪ್ರಯೋಜನಕ್ಕೆ ಬಾರವೆಂದು ಗೊತ್ತಾಯಿತು. ನಾವು ನಿಧಾನವಾಗಿ ಅವುಗಳನ್ನು ಹತಮಾಡುವ ಬೇರೆ ಉಪಾಯ ಹುಡುಕಬೇಕು" ಎಂದನು.

"ಹೌದು ಹೌದು. ನಾವು ಅಂಥಾ ಉಪಾಯವನ್ನು ಆಲೋಚನೆ ಮಾಡಿ ಹುಡುಕುವುದರೊಳಗೇ ಆ ಕ್ರೂರರು ನಮ್ಮನ್ನು ಹತಾಹತ ಮಾಡಿಬಿಡುತ್ತಾರೆ. ಎರಡು ಪಕ್ಷಿಗಳಿಂದಲೇ ಹೀಗಾದರೆ, ಹತ್ತಿಪ್ಪತ್ತು ಅಂಥ ಪಕ್ಷಿಗಳೂ ಆ ಕ್ರೂರರೂ ಬಂದರೆ ಏನಾದೀತು! ನಿನ್ನ ಅಪೂರ್ವವಾದ ರಾಜಭವನವೂ, ನನ್ನ ಕೋಟೆ ಗುಹೆಮನೆ. ಈ ಅಡವಿ ರಾಜ್ಯವಷ್ಟೂ ಅವರ ವಶವಾಗಿ ಹೋಗುತ್ತೆ. ಆ ಘೋರವನ್ನು ನೋಡಲು ರಾಕ್ಷಸನೇ ಇರಲಿಕ್ಕಿಲ್ಲ" ಎಂದನು ಉಗ್ರಾಕ್ಷ ನಿರಾಶೆಯಿಂದ.

ಅಷ್ಟೊಂದು ಭಯಂಕರ ರೂಪದ ಬಲಶಾಲಿಯಾದ ಉಗ್ರಾಕ್ಷನು, ಪುಕ್ಕಲುತನ ಹೆಚ್ಚಾಗಿರುವ ಸಾಧಾರಣ ಮನುಷ್ಯನ ಹಾಗೆ ನೀರು ಸೋರಿಸುವುದನ್ನು ನೋಡಿ ಚಿತ್ರಸೇನನಿಗೆ ಬಹಳ ಕನಿಕರವೆನಿಸಿತು.

"ಆ ಜ್ವಾಲಾದ್ವೀಪ ವಾಸಿಗಳು ನಮ್ಮ ರಾಜ್ಯವನ್ನು ಆಕ್ರಮಿಸಿಕೊಳ್ಳಲು ಪ್ರಯತ್ನಿಸುವರೆಂದು ಅನುಮಾನವಿದೆಯೇ ಉಗ್ರಾಕ್ಷಾ?" ಎಂದು ಕೇಳಿದನು ಚಿತ್ರಸೇನ.

"ಹಾಗಿಲ್ಲದಿದ್ದರೆ ಅವರೇಕೆ ಈ ಬಗೆಯ ದಾಳಿ ಮಾಡಬೇಕು? ಕಾರಣವಿಲ್ಲದೆ ಸುಮ್ಮನೆ ಯಾರೂ ಏನನ್ನೂ ಮಾಡುವುದಿಲ್ಲವಷ್ಟೆ?" ಎಂದನು ಉಗ್ರಾಕ್ಷ.

"ಅದೇ ನನಗೂ ಗೊತ್ತಾಗದಿರುವ ಪ್ರಶ್ನೆ. ಕೇವಲ ನಮ್ಮ ಮೂಲೆ ಮುಡುಕು ಹಳ್ಳಿಗಳ ಅಲ್ಲಿಂದೊಬ್ಬ ಇಲ್ಲಿಂದೊಬ್ಬನನ್ನು ಎತ್ತಿಕೊಂಡು ಹೋಗಲಿಕ್ಕಷ್ಟೇ ಅವರು ಬರುವುದಲ್ಲವೆಂದು ನನಗೂ ಕಾಣುತ್ತದೆ" ಎಂದನು ಚಿತ್ರಸೇನ.

"ಆ ಕ್ರೂರರಲ್ಲಿ ಇನ್ನೊಬ್ಬನು ಜೀವದೊಂದಿಗೆ ಸಿಕ್ಕಿದ್ದರೆ ಅವನಿಂದ ನಿಜ ಸಂಗತಿಯನ್ನು ಹೊರಕ್ಕೆ ಕಾರಿಸಿಬಿಡುತ್ತಿದ್ದೆ. ಸಿಕ್ಕಿದ್ದ ಒಬ್ಬನೇ ಒಬ್ಬ, ಬಾಯಿ ಬಿಡದೇನೇ ಪ್ರಾಣಬಿಟ್ಟ! ಉಂ" ಎಂದು ಉಗ್ರಾಕ್ಷನು ಕೈಗಳನ್ನು ಹಿಸುಕಿಕೊಂಡು ಹಲ್ಲು ಕಡಿದುಕೊಂಡನು.



"ನಿರಾಶನಾಗಬೇಡಯ್ಯ ಉಗ್ರಾಕ್ಷಾ. ಯಾವುದೋ ಒಂದು ದಿನ ಆ ಕ್ರೂರರಲ್ಲಿ ಕೆಲವರಾದರೂ ನಮ್ಮ ಕೈಗೆ ಸಿಕ್ಕದೆ ಹೋಗರು. ಅವರಿಗೆ ಚಿತ್ರಹಿಂಸೆ ಕೊಟ್ಟು ಬಾಯಿ ಬಿಡಿಸದೆ ಬಿಡಲಾರೆವು. ಅದು ಹೋಗಲಿ. ಆ ಜ್ವಾಲಾದ್ವೀಪವೆಂಬುದು ಎಲ್ಲಿದೆ? ದ್ವೀಪವೆನ್ನುವುದರಿಂದ ಸಮುದ್ರದ ನಡುವಿನಲ್ಲಿದೆ ಎನ್ನಬಹುದು. ಹಾಗೆ ನೋಡಿದರೆ ಎಲ್ಲವೂ ದ್ವೀಪವೇ. ಅದು ಯಾವ ದಿಕ್ಕಿನಲ್ಲಿದೆ? ಈ ಭಯಂಕರ ಪಕ್ಷಿಗಳನ್ನು ಅವರು ಹೇಗೆ ಸ್ವಾಧೀನ ಪಡಿಸಿಕೊಂಡರು? ಅವುಗಳನ್ನು ತಾವು ಹೇಳುವ ಹಾಗೆ ಕೇಳುವಂತೆ ಪಳಗಿಸಿ, ಸವಾರಿ ಮಾಡುತ್ತಾ ನಮ್ಮ ರಾಜ್ಯಕ್ಕೆ ಬಂದು ಮನುಷ್ಯರನ್ನು ಎತ್ತಿಕೊಂಡು ಹೋಗುವುದರ ರಹಸ್ಯವೇನು? ಮೊದಲು ಇವನ್ನೆಲ್ಲಾ ನಾವು ತಿಳಿದುಕೊಳ್ಳಬೇಕು. ಇರಲಿ ನೋಡೋಣ. ನಾನೀಗ ಹೋಗುತ್ತೇನೆ. ನೀನು ಹೆಚ್ಚು ವಿಚಾರ ತಲೆಗೆ ಹಚ್ಚಿಕೊಳ್ಳದೆ ಗಾಯಗಳು ವಾಸಿಯಾಗುವವರೆಗೆ ವಿಶ್ರಾಂತಿ ತೆಗೆದುಕೋ. ಕೋಟೆಯ ರಕ್ಷಣೆಯನ್ನು ಇನ್ನಷ್ಟು ಬಲಪಡಿಸುವುದು ಒಳ್ಳೆಯದು, ನಾನೂ ಸಾಧ್ಯವಾದಷ್ಟು ಜಾಗ್ರತೆಯಲ್ಲಿರುತ್ತೇನೆ. ಯಾರೂ ಧೈರ್ಯಗೆಡಬಾರದು" ಎಂದು ಹೇಳಿ ಚಿತ್ರಸೇನನು ತನ್ನ ಪರಿವಾರದೊಂದಿಗೆ ತನ್ನ ಭವನದ ಕಡೆಗೆ ಹೊರಟನು.

"ನೋಡು ಚಿತ್ರಸೇನಾ, ನಾನು ಇಷ್ಟೊಂದು ದೀನಾವಸ್ಥೆಯಲ್ಲಿರುವೆನೆಂದು ಯಾರಿಗೂ ಹೇಳಬೇಡ. ನಿನ್ನ ಪರಿವಾರದವರಿಗೂ ಹೇಳದಿರು. ಇದು ಹೊರಬಿದ್ದು ಬಿಟ್ಟರೆ ನಿನ್ನ ಪೌರರ ದೃಷ್ಟಿಯಲ್ಲಿ ನಾನು ಸಾಧಾರಣ ಮನುಷ್ಯರಿಗಿಂತಲೂ ಹೀನನಾದೇನು!" ಎಂದು ಉಗ್ರಾಕ್ಷನು ಸ್ವಲ್ಪ ಹೊರಗೆ ಬಂದು ಕೂಗಿ ಹೇಳಿದನು. ಉಗ್ರಾಕ್ಷನ ಆ ಬಗೆಯ ಮಾತು ಕೇಳಿ ಚಿತ್ರಸೇನನಿಗೆ ನಗು ಬಂದಿತು. ಆಗ ಸೇನಾನಾಯಕನು ಅವನ ಮುಂದೆ ಬಂದು "ಮಹಾರಾಜಾ" ಎಂದು ಚಿತ್ರಸೇನನ ಲಕ್ಷ್ಯವನ್ನು ಸೆಳೆದನು.

"ಏನು ಸೇನಾಧಿಪತಿ?" ಎಂದು ಚಿತ್ರಸೇನನು ಪ್ರಶ್ನಿಸಲು, "ಆ ದ್ವೀಪವಾಸಿಗಳನ್ನು ಇದಿರಿಸಲು ನಮಗೆ ಜತೆಯಾಗಿ ಈ ಉಗ್ರಾಕ್ಷನ ಅನುಚರರಾದ ರಾಕ್ಷಸರು ಕೂಡಾ ಇದ್ದರೆ ಒಳ್ಳೆಯದು. ಯಾವ ದಿನ ಆ ಜ್ವಾಲಾದ್ವೀಪ ವಾಸಿಗಳು ದೊಡ್ಡ ಬಳಗದೊಂದಿಗೆ ಹಾರಿಬಂದು ನಮ್ಮ ರಾಜ್ಯದ ಮೇಲೆ ಬೀಳುವರೋ?" ಎಂದನು ಸೇನಾಧಿಪತಿ.

ಸೇನಾಧಿಪತಿಯ ಮಾತು ಕೇಳಿ ಚಿತ್ರಸೇನನಿಗೆ ಕೋಪ ಬಂದಿತು. ಆದರೆ ಕೋಪವನ್ನು ಹೊರಗೆ ತೋರಿಸಿಕೊಳ್ಳದೆ, "ಅಂದರೆ ನಮ್ಮ ನಗರದ ರಕ್ಷಣೆಗೆ ಈ ರಾಕ್ಷಸರ ಗುಂಪನ್ನು ಜತೆಗಿಟ್ಟುಕೊಳ್ಳಬೇಕೆಂದು ತಾನೇ ಹೇಳುವಿ? ಹಾಗೆಂದಿಗೂ ಮಾಡಕೂಡದು. ನನ್ನ ಭವನವನ್ನೂ, ನಗರವನ್ನೂ ನನ್ನ



ಕೂಗುತ್ತಿದ್ದರು. ಆ ಕೂಗುಗಳು ಗರ್ಘರಕಂಠದಿಂದ ಒಬ್ಬನ ಸ್ವರವೇ ನಾಲ್ವರ ಸ್ವರದಂತೆ ಕೇಳುತಿತ್ತು.

ಚಿತ್ರಸೇನನು ನಿಂತನು. ಸೇನಾಧಿಪತಿ, "ಮಹಾರಾಜಾ, ಆ ಜ್ವಾಲಾದ್ವೀಪದ ಪಿಶಾಚಿಗಳು ಮತ್ತೆ ದಾಳಿ ತೆಗೆದರೇನೋ!" ಎಂದನು ನಡುಗುವ ಕಂಠದಿಂದ.

ಚಿತ್ರಸೇನನು ಮೂಡು ದಿಕ್ಕಿನ ಆಕಾಶದ ಕಡೆಗೆ ನೋಡುತ್ತಾ "ಸೂರ್ಯೋದಯವಾಗಲಿಕ್ಕಾಯಿತು. ಹಗಲು ಹೊತ್ತಿನಲ್ಲಿ ಅವರು ಬಂದುದನ್ನು ಈವರೆಗೂ ಕಂಡವರಿಲ್ಲ" ಎಂದನು.

ಅಷ್ಟರಲ್ಲಿ ಕೂಗುವ ರಾಕ್ಷಸರಿಬ್ಬರೂ ಅವನ ಹತ್ತಿರ ಓಡಿಬಂದು ತೇಕುತ್ತಾ, ಉಬ್ಬಸಬಿಡುತ್ತಾ, "ಮಹಾರಾಜಾ, ಉಗ್ರಾಕ್ಷ ನಾಯಕರು ನಿಮ್ಮನ್ನು ಈಗಲೇ ಕರೆದುಕೊಂಡು ಬರಲು ಹೇಳಿದ್ದಾರೆ. ಅವರು ಈಗ ಕುಂಭೀಕುಪ್ಪದ ಹತ್ತಿರ ಇದ್ದಾರೆ, ಬನ್ನಿ" ಎಂದರು.

"ಇಷ್ಟೊಂದು ಅವಸರ ಏಕೆ ಬಂದಿತು?" ಎಂದನು ಚಿತ್ರಸೇನ.

ಆ ಭಯಂಕರ ಪಕ್ಷಿಗಳ ಮೇಲೆ ಏರಿಬಂದವರಲ್ಲಿ ಒಬ್ಬನು ಸಿಕ್ಕಿಬಿದ್ದಿದ್ದಾನೆ. ಆದಕ್ಕಾಗಿ ನಮ್ಮ ನಾಯಕ ನಿಮ್ಮನ್ನು ಈಗಲೇ ಕರೆತರಲು ಹೇಳಿದ್ದು" ಎಂದರು ಆ ರಾಕ್ಷಸರು.

"ಈ ಸಂಗತಿ ಹೇಳಲು ನೀವು ಹೀಗೆ ಪ್ರಾಣ ಎಳೆದುಕೊಳ್ಳುವವರ ಹಾಗೆ ಓಡಿಬರಬೇಕೆ? ಸಿಕ್ಕಿಬಿದ್ದವನು ಎಲ್ಲಿಗೆ ಓಡುತ್ತಾನೆ?" ಎನ್ನುತ್ತಾ ಚಿತ್ರಸೇನನು ಆ ರಾಕ್ಷಸರೊಂದಿಗೆ ಹೊರಟನು.

"ಅವನು ಮರದ ಮೇಲೆ ಇದ್ದಾನೆ. ಕೆಳಗಿಳಿದು ಬರಲಾರೆನೆನ್ನುತ್ತಾನೆ. ನೀವು ಬಂದರೆ ಹೊರತು ಅವನ ಕೆಲಸ ಅನುಕೂಲವಾಗುವುದಿಲ್ಲ. ನಿಮ್ಮ ಮೇಲೆಯೇ ನಮ್ಮ ಒಡೆಯನಿಗೆ ನಂಬುಗೆ" ಎಂದರು ರಾಕ್ಷಸರು. ಈ ರಾಕ್ಷಸ ಭಟರಿಬ್ಬರೂ ಏನೋ ಮದ್ಯ ಸೇವನೆಯು

ಕತ್ತಿಯಿಂದ ರಕ್ಷಿಸಿಕೊಳ್ಳಲು ಸಾಧ್ಯವಾಗದೆ ಹೋದಾಗ ಬೇಕಾದರೆ ನೀನು ಹೇಳಿದಂತೆ ರಾಕ್ಷಸರ ಸಹಾಯ ಕೇಳುವುದಕ್ಕೆ ಬದಲು ನಾನು ರಾಜ್ಯವನ್ನೇ ತ್ಯಾಗಮಾಡಿಬಿಡುತ್ತೇನೆ" ಎಂದನು ಚಿತ್ರಸೇನ.

ಆ ಮಾತು ಸೇನಾಧಿಪತಿಯ ತಲೆಗೆ ಕುಟ್ಟಿದಂತಾಗಿ ತಲೆ ತಗ್ಗಿಸಿ ಬಾಯಿಮುಚ್ಚಿದನು.

ಚಿತ್ರಸೇನನೂ ಅವನ ಪರಿವಾರವೂ ಕಾಡಿನಲ್ಲಿ ಸ್ವಲ್ಪದೂರ ಹೋಗುವಷ್ಟರಲ್ಲಿ, ಇದ್ದಕ್ಕಿದ್ದ ಹಾಗೆ ಹಿಂಬದಿಯಲ್ಲಿ ಏನೇನೋ ಕೂಗುಗಳು ಕೇಳತೊಡಗಿತು. ಚಿತ್ರಸೇನನು ಆಶ್ಚರ್ಯಪಡುತ್ತಾ ಹಿಂದಿರುಗಿ ನೋಡಿದನು.

ವಿಕೃತಾಕೃತಿಯ ಆಯುಧಗಳನ್ನು ಹಿಡಿದುಕೊಂಡು ಇಬ್ಬರು ರಾಕ್ಷಸರು ಗುಂಡಿಗೆ ಒಡೆಯುವಷ್ಟು ವೇಗದ ಉಸಿರುಬಿಡುತ್ತಾ ಓಡಿಬಂದು, "ರಾಜಾ! ರಾಜಾ! ನಿಲ್ಲು ನಿಲ್ಲೂ!" ಎಂದು

ಮಯಕದಲ್ಲಿದ್ದಾರೆಂದು ಚಿತ್ರಸೇನನು ಭಾವಿಸಿದನು. ವೈರಿ ಮನುಷ್ಯ ಒಂದುಸಾರಿ ಕಣ್ಣಿಗೆ ಬಿದ್ದ ಮೇಲೆ, ಇಳಿದು ಬಾರದಿರುವುದೂ ಇಳಿಯುವುದೂ ಅವನಿಂದಾಗುವ ಕೆಲಸವಲ್ಲ. ಅವನನ್ನು ಕೆಳಗಿಳಿಸಲು ಹಾಗೇನು ದೊಡ್ಡ ಕಷ್ಟ ?

ಹೀಗಂದುಕೊಳ್ಳುತ್ತಾ, ಚಿತ್ರಸೇನನು ತನ್ನ ಅನುಚರರೊಡನೆ ಕುಂಭೀಕುಪ್ಪ ಗ್ರಾಮವನ್ನು ಸಮೀಪಿಸಿದನು. ಊರ ಹೊರಗಿನ ಒಂದು ಮಹಾ ವೃಕ್ಷದ ಸುತ್ತಲೂ, ಕೆಲವು ರಾಕ್ಷಸರೂ, ಕೆಲವು ಗ್ರಾಮವಾಸಿ ಮನುಷ್ಯರೂ ನಿಂತಿರುವುದು ಕಂಡಿತು. ಅವರೆಲ್ಲರ ನಡುವೆ ಉಗ್ರಾಕ್ಷನೂ ನಿಂತಿದ್ದನು. ಎಲ್ಲರ ದೃಷ್ಟಿಗಳೂ ಮರದ ಮೇಲಕ್ಕೆ ಲಕ್ಷ್ಯವಾದಂತಿದೆ. ಆ ಮರದ ಕೊಟ್ಟಕೊನೆಯ ಕೊಂಬೆಯಲ್ಲಿ ಹುಲಿಚರ್ಮ ಧರಿಸಿದ ಒಬ್ಬನು ಕೈಯಲ್ಲಿ ಕತ್ತಿಯನ್ನು ಝಳಪಿಸಿಕೊಂಡಿದ್ದನು. ಗರ್ಜಿಸುವಂತೆ ಕೂಗುತ್ತಿದ್ದನು.

"ನಾನು ಇಳಿದು ಬರಲಾರೆ! ಬೇಕಂತ ಇಳಿದು ರಾಕ್ಷಸರ ಹೊಟ್ಟೆಗೆ ಬೀಳಲಾರೆ! ಎಷ್ಟು ಮಾತ್ರಕ್ಕೂ ಇಳಿಯಲಾರೆ. ಯಾರಾದರೂ ಈ ಮರ ಹತ್ತಿಬಂದರೆ ಅವನನ್ನು ಈ ಕತ್ತಿಗೆ ಬಲಿ ಕೊಟ್ಟು ನಾನೂ ತಿವಿದುಕೊಂಡು ಸಾಯುತ್ತೇನೆ" ಎಂದು ಕೂಗುತ್ತಿದ್ದನು ಮರದ ಮೇಲಿರುವವನು.

ಚಿತ್ರಸೇನನು ಉಗ್ರಾಕ್ಷನ ಬಳಿಗೆ ಹೋಗಿ, "ಏನಿದು ಹೀಗೆಲ್ಲಾ ?" ಎಂದನು.

ಚಿತ್ರಸೇನನ ಕಂಠಸ್ವರ ಕೇಳಿದ ಕೂಡಲೇ ಉಗ್ರಾಕ್ಷನು ಮೆಟ್ಟಿಬಿದ್ದು, "ಬಂದೆಯಾ ಚಿತ್ರಸೇನಾ! ಬಂದೆಯಾ! ಅಗೋ ಆ ಮರದ ಮೇಲಿರುವವನು ಜ್ವಾಲಾದ್ವೀಪದಿಂದ ಬಂದ ಕ್ರೂರ ಮನುಷ್ಯ. ರಾತ್ರಿ ಇಲ್ಲಿ ನಡೆದ ಹೋರಾಟದಲ್ಲಿ ಹಿಂದೆ ಬಿದ್ದು ಹೋಗಲಿಕ್ಕಾಗದೆ ಹೀಗೆ ಸಿಕ್ಕಿಬಿದ್ದಿದ್ದಾನೆ. ಪ್ರಾಣದೊಂದಿಗೆ ಅವನನ್ನು ಹಿಡಿಯುವುದು





ಸಾಧ್ಯವಿಲ್ಲವೆಂದೇ ಕಾಣುತ್ತದೆ. ಇವನಿಂದ ನಾವು ಅನೇಕ ರಹಸ್ಯಗಳನ್ನು ಬರಮಾಡಿಕೊಳ್ಳಬೇಕು. ನಾವು ಸುಟ್ಟು ತಿಂದುಬಿಡುತ್ತೇವೆಂದು ಅವನು ಹೆದರುತ್ತಿದ್ದಾನೆ. ನೀನು ಅವನಿಗೆ ಅಭಯಹಸ್ತ ನೀಡಿ, ಹೇಗೋ ಒಂದು ವಿಧವಾಗಿ ಕೆಳಗೆ ಇಳಿಸಬಲ್ಲೆ ಎಂಬ ನಂಬುಗೆ ನನಗೆ ?" ಎಂದನು.

ಚಿತ್ರಸೇನನು ಮರದ ಕೊನೆಯ ಕೊಂಬೆಯ ಕಡೆಗೆ ದೃಷ್ಟಿ ಸಾರಿಸಿ, "ಎಲೋ, ಹೆದರಬೇಡಪ್ಪಾ. ನಿನ್ನ ಪ್ರಾಣಕ್ಕೆ ಏನೂ ಭಯವಿಲ್ಲ. ಮರದಿಂದ ಇಳಿದು ಬಾರಪ್ಪಾ!" ಎಂದು ಕೂಗಿ ಹೇಳಿದನು.

"ಇಷ್ಟು ಮಂದಿ ಹೇಳಿದರೂ, ನಾನು ಇಳಿಯಲಾರೆ ನೆನ್ನುತ್ತಿದ್ದರೆ ನೀನು ಯಾರು ? ಹೀಗೆ ಹೇಳಲು ದೊಡ್ಡ ರಾಜನೋ ನೀನು ?" ಎಂದು ಕರ್ಕಶ ವಾಗಿ ಕೂಗಿ ಕೇಳಿದನು ಹುಲಿಚರ್ಮದವನು.

"ಹೌದಪ್ಪಾ ಹೌದು. ರಾಜನಾದ ನಾನೇ ಬಂದಿದ್ದೇನೆ. ಈ ಅರಣ್ಯವೂ ಇದರಲ್ಲಿರುವ ಹಳ್ಳಿಗಳೂ ಪಟ್ಟಣಗಳೂ ನನ್ನ ಪರಿಪಾಲನೆಯಲ್ಲಿಯೇ ಇವೆ. ನಿನಗೆ ಪ್ರಾಣಭಯ ಬೇಡವೆಂದು ರಾಜನಾದ ನಾನು ಅಭಯಹಸ್ತ ನೀಡುತ್ತೇನೆ" ಎಂದನು ಚಿತ್ರಸೇನ.

ಚಿತ್ರಸೇನನು ಹಾಗೆ ಹೇಳಿದ ಕೂಡಲೇ ಅಲ್ಲಿ ಗುಂಪು ಕೂಡಿದವರೆಲ್ಲರೂ "ಮಹಾರಾಜನಿಗೆ ಜೈ ಜೈ!" ಎಂದು ಆಕಾಶಕ್ಕೇರುವ ಹಾಗೆ ಜಯ ಘೋಷ ಮಾಡಿದರು.

ಆ ಜಯಘೋಷಣೆಯನ್ನು ಕೇಳಿ ಮರದ ಮೇಲಿದ್ದವನು ಆಶ್ಚರ್ಯದಿಂದ ಚಿತ್ರಸೇನನನ್ನು ನೋಡಿ, "ಹಾಗಾದರೆ ಈ ರಾಕ್ಷಸರ ಸಂಗತಿ ಹೇಗೆ ? ಅವರು ನನ್ನನ್ನು ಕೈಕಾಲು ಹಿಡಿದೆಳೆದು ಮುರಿದು ಕಚ್ಚಿ ತಿನ್ನದೆ ಬಿಡುವರೇ ?" ಎಂದನು.

"ಅವರಿಂದ ನಿನಗೆ ಯಾವ ಹಾನಿಯೂ ಆಗದಂತೆ ನಾನು ನೋಡಿಕೊಳ್ಳುತ್ತೇನೆ. ಈ ರಾಕ್ಷಸ ರೆಲ್ಲಾ ನನ್ನ ಆಜ್ಞೆಗೆ ವಿಧೇಯರಾದವರೇ" ಎಂದು ಚಿತ್ರಸೇನನು ಉಗ್ರಾಕ್ಷನನ್ನು ನೋಡಿದನು. ಉಗ್ರಾಕ್ಷನು ಇತರ ರಾಕ್ಷಸರ ಕಡೆಗೆ ಕಣ್ಣು ತಿರುಗಿಸಿದನು. ಕೂಡಲೇ ರಾಕ್ಷಸರೆಲ್ಲರೂ "ಚಿತ್ರಸೇನ ಮಹಾರಾಜರಿಗೆ ಜೈ!" ಎಂದು ಆರ್ಭಟಿಸಿ ತಲೆ ಬಾಗಿದರು.

ಉಗ್ರಾಕ್ಷನು ಕೂಡಾ ಚಿತ್ರಸೇನನಿಗೆ ತಲೆಬಾಗಿ ಮೆಲ್ಲನೆ "ಈ ಮಹಾರಾಕ್ಷಸನಿಗೆ ಎಂತಹ ಗತಿ ಬಂತು!" ಎಂದು ಕೋರೆಹಲ್ಲುಗಳನ್ನು ಕರಕರ ಮಾಡಿಕೊಂಡನು.

"ಆಗಲಿ ಮಹಾರಾಜರೆ! ನಿಮ್ಮ ಅಭಯವನ್ನು ನಂಬಿ ಮರದಿಂದ ಇಳಿಯುತ್ತೇನೆ" ಎನ್ನುತ್ತಾ ಹುಲಿಚರ್ಮದ ಮನುಷ್ಯ ಸರಸರನೆ ಮರದಿಂದ ಇಳಿದು ನೆಲದಲ್ಲಿ ನಿಂತನು.

"ನಿನಗೆ ಯಾವ ಭಯವೂ ಇಲ್ಲ. ನಿನ್ನ ಕತ್ತಿ ನಮ್ಮ ಸೇನಾನಿಯ ಕೈಗೆ ಕೊಡು" ಎಂದನು

ಚಿತ್ರಸೇನ. ಹುಲಿಚರ್ಮದವನು ಮರುಮಾತಾಡದೆ ತನ್ನ ಕತ್ತಿಯನ್ನು ಸೇನಾನಾಯಕನಿಗೆ ಕೊಟ್ಟನು.

"ಚಿತ್ರಸೇನಾ, ಗಾಣದಲ್ಲಿ ಹಾಕಿ ತಿರುಗಿಸುವ ಅಗತ್ಯವಿಲ್ಲದೆಯೇ ನೀನು ಇವನಿಂದ ರಹಸ್ಯಗಳನ್ನು ಬರಮಾಡಿಕೊಳ್ಳುವಿಯೆಂದು ನನಗೆ ತೋರುತ್ತದೆ" ಎಂದನು ಉಗ್ರಾಕ್ಷ.

ಅದನ್ನು ಕೇಳಿಕೊಂಡ ಹುಲಿಚರ್ಮದವನು. "ಓ ! ಹೇಳುತ್ತೇನೆ. ನನಗೆ ತಿಳಿದ ರಹಸ್ಯಗಳನ್ನೆಲ್ಲಾ ಹೇಳುತ್ತೇನೆ. ವಿಶ್ವಾಸದ್ರೋಹಿಗಳ ಸಂಗತಿ. ತಾನೇ ? ನಾವೆಲ್ಲಾ ಒಂದೇ ಭಾವದ ಸ್ನೇಹಿತರು ಅಂದುಕೊಂಡು ನನ್ನನ್ನೂ ಕರೆದುಕೊಂಡು ಬಂದು ಅಪಾಯ ಬಂದ ಕೂಡಲೇ ನನ್ನನ್ನು ಬಿಟ್ಟು ಪಕ್ಷಿಗಳ ಮೇಲೆ ಸವಾರಿ ಮಾಡಿಕೊಂಡು ಓಡಿಬಿಟ್ಟಿದ್ದಾರೆ. ಇಷ್ಟು ಹೊತ್ತಿಗೆ ಅವರು ಅಲ್ಲೆಲ್ಲೋ ಪೂರ್ವ ಸಮುದ್ರದಲ್ಲಿರುವ ಜ್ವಾಲಾದ್ವೀಪವನ್ನು ಸೇರಿರಬೇಕೆಂದು ನನ್ನ ಅನುಮಾನ" ಎಂದನು ಹುಲಿಚರ್ಮ ತೊಟ್ಟವನು.

"ಹಾಗಾದರೆ ನೀನು ಆ ದ್ವೀಪದವನು ಅಲ್ಲವೇನು ?" ಎಂದು ಚಿತ್ರಸೇನನು ಆಶ್ಚರ್ಯದಿಂದ ಕೇಳಿದನು.

"ನಾನು ಆ ದ್ವೀಪದವನಾಗಿದ್ದರೆ ನಿಮಗೆ ಪ್ರಾಣದೊಂದಿಗೆ ಸಿಕ್ಕುತ್ತಿದ್ದೆನೇ ? ಆ ದ್ವೀಪವಾಸಿಗಳಿಗೆ ಸಹಾಯ ಮಾಡುತ್ತಿರುವ ಕಪಿಲಪುರದ ರಾಜ, ನಾಗವರ್ಮ ರಾಜನ ಸೈನ್ಯದಲ್ಲಿರುವವನು ನಾನು. ಅಮರಪಾಲನೆಂದು ನನ್ನ ಹೆಸರು" ಎಂದನು ಹುಲಿಚರ್ಮದವನು.

ನಾಗವರ್ಮನ ಹೆಸರು ಕೇಳುತ್ತಲೇ ಉಗ್ರಾಕ್ಷನು ಅದುರಿಬಿದ್ದು, "ಆ ! ಬರಿಯ ಸೇನಾನಾಯಕನಾಗಿದ್ದ ನಾಗವರ್ಮ ಈಗ ಕಪಿಲಪುರಕ್ಕೆ ರಾಜನಾಗಿದ್ದಾನೆಯೆ ? ಯಾವಾಗ ರಾಜನಾದ ? ರಾಜಾ ವೀರಸಿಂಹನು ಏನಾದನು ?" ಎಂದು ಕೇಳಿದನು.

"ವೀರಸಿಂಹ ಮಹಾರಾಜರು ಬಹುಶಃ ಜ್ವಾಲಾದ್ವೀಪದ ಕಾರಾಗೃಹದಲ್ಲಿ ಕೊಳೆಯುತ್ತಿರ



ಬೇಕು. ಅವರ ರಾಜ್ಯವನ್ನು ಅಪಹರಿಸಿದ್ದು ಮಾತ್ರವಲ್ಲದೆ, ಅವರ ಏಕೈಕ ಪುತ್ರಿ ಕಾಂತಿಮತಿಯನ್ನು ಬಲವಂತದಿಂದ ಮದುವೆ ಮಾಡಿಕೊಳ್ಳಬೇಕೆಂದು ನಾಗವರ್ಮನು ಪ್ರಯತ್ನಿಸಿಕೊಂಡಿದ್ದಾನೆ. ಅಷ್ಟೇ ಅಲ್ಲ. ಮಹಾ ಘೋಕರಿಗಳಾದ ಜ್ವಾಲಾದ್ವೀಪ ವಾಸಿಗಳ ಸಹಾಯದಿಂದ, ತಮ್ಮ ಸುತ್ತಲಿನ ರಾಜ್ಯಗಳನ್ನು ನುಂಗಲಿಕ್ಕೂ ಹೊಂಚು ಹಾಕುತ್ತಿದ್ದಾನೆ" ಎಂದನು ಅಮರಪಾಲ.

ಚಿತ್ರಸೇನನಿಗೆ ತನ್ನ ರಾಜ್ಯದ ಎಲ್ಲೆಗಳಲ್ಲಿರುವ ರಾಜ್ಯಗಳ ವಿವರಗಳೇನೂ ಗೊತ್ತಿರಲಿಲ್ಲ. ಈ ಅಮರಪಾಲನು ಹೇಳುವುದನ್ನು ಹಿಡಿದು ಈ ಮೊದಲೇ ತಮ್ಮ ಸರಹದ್ದಿನಲ್ಲಿರುವ ಒಬ್ಬಾನೊಬ್ಬ ದುಷ್ಟನೊಂದಿಗೆ ಜ್ವಾಲಾದ್ವೀಪ ವಾಸಿಗಳು ಸ್ನೇಹ ಕಟ್ಟಿಕೊಂಡಿದ್ದಾರೆಂದು ಗೊತ್ತಾಗುತ್ತದೆ. ಆದರೆ ಈ ಅಮರಪಾಲನು ಹೇಳುವುದೆಲ್ಲಾ ನಿಜವೇ ಎಂದು ಹೇಗೆ ನಂಬುವುದು ? ಅವನ ಮಾತಿನಲ್ಲಿ ಮೋಸ ವಿರಲಿಕ್ಕಿಲ್ಲವೇ ?

ಚಿತ್ರಸೇನನು ಹೀಗೆ ಆಲೋಚಿಸಿಕೊಂಡಿರುವಾಗ ದೂರದಲ್ಲಿ ಕುದುರೆಗಳು ಓಡಿಬರುವ ಖುರಪುಟ ಧ್ವನಿಗಳು ಕೇಳತೊಡಗಿತು. ನೋಡುತ್ತಿದ್ದ ಹಾಗೆ ಅವನ ಮಂತ್ರಿ ನಾಲ್ವರು ಸೈನಿಕರೊಡನೆ ಅಲ್ಲಿಗೆ ಬಂದು, ಎಲ್ಲರೂ ಕುದರೆಗಳಿಂದ ಇಳಿದರು.

ಮಂತ್ರಿ ನೆಟ್ಟಗೆ ಚಿತ್ರಸೇನನ ಹತ್ತಿರ ಬಂದು, "ಮಹಾರಾಜಾ. ಧವಳಗಿರಿಯಿಂದ ನಿಮ್ಮ ತಂದೆಯವರು ಸಮಾಚಾರ ಕಳುಹಿಸಿದ್ದಾರೆ. ನಾಗವರ್ಮನೆಂಬ ಒಬ್ಬ ರಾಜದ್ರೋಹಿ ಸೈನ್ಯದೊಂದಿಗೆ ಧವಳಗಿರಿಯ ಮೇಲೆ ಬರುತ್ತಾನಂತೆ. ನಿಮ್ಮಿಂದ ಸ್ವಲ್ಪ ಸೈನಿಕ ಸಹಾಯ ಬೇಕಂತೆ" ಎಂದನು.

ಚಿತ್ರಸೇನನು ತನ್ನ ಸೇನಾನಾಯಕನ ಕಡೆಗೆ ತಿರುಗಿ, "ನೀನು ನಮ್ಮ ಸೈನ್ಯದ ಅರ್ಧಭಾಗದಷ್ಟು ಮಂದಿ ಸೈನಿಕರನ್ನು ಕರೆದುಕೊಂಡು ಧವಳಗಿರಿಗೆ ಹೋಗಬೇಕು. ಇಲ್ಲಿಯ ರಕ್ಷಣೆಯ ಭಾರ ನಾನು ನೋಡಿಕೊಳ್ಳುತ್ತೇನೆ" ಎಂದನು.

"ಅಪ್ಪಣೆ ಮಹಾರಾಜಾ" ಎಂದು ಸೇನಾನಿ ಅಲ್ಲಿಂದ ಹೊರಟು ಹೋದನು.

"ಈ ನಾಗವರ್ಮನ ಸೈನ್ಯದ ಹಿಂದೆ ಭಯಂಕರ ಪಕ್ಷಿಗಳ ಸವಾರರಾದ ಜ್ವಾಲಾದ್ವೀಪವಾಸಿಗಳು ಕೂಡಾ ಇರಲಿಕ್ಕಿಲ್ಲವೆಂದು ಹೇಗೆ ನಂಬುವುದು ?" ಎಂದು ಉಗ್ರಾಕ್ಷನು ಅಮರಪಾಲನನ್ನು ನೋಡಿ ಹೇಳಿದನು.

ಅಮರಪಾಲನು ಅದಕ್ಕೇನೋ ಉತ್ತರ ಕೊಡಲು ಬಾಯಿ ತೆರೆದು, ಕೂಡಲೇ ಮುಚ್ಚಿ ಎಲ್ಲರ ಕಡೆಗೂ ಏನೋ ಅನುಮಾನದಿಂದ ನೋಡಿದನು. ಆಮೇಲೆ ಆಕಾಶದ ಕಡೆಗೆ ತಲೆ ಎತ್ತಿದನು. —(ಇನ್ನೂ ಇದೆ)






# ಪುಣ್ಯ ಕಾರ್ಯ

**ಒಂ**ದು ದಿನ ಕಳೆದು ರಾತ್ರಿ ಬೆಳಗಾದ ಕೂಡಲೇ ಮತ್ತೆ ಅದೇ ದಿನವು ಬರುವಂತೆ ತಿರುಗಿ ಬಂದ ರಾಜಾ ತ್ರಿವಿಕ್ರಮನು, ಮರದ ಮೇಲೆ ಹತ್ತಿ ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ ಎಂದಿನಂತೆ ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವವನ್ನು ಆವಹಿಸಿ ಕೊಂಡಿದ್ದ ಬೇತಾಳವು ಶವದ ಬಾಯಿಯ ಮೂಲಕ ಮಾತಾಡಲು ತೊಡಗಿ "ಎಲೈ ಮಹಾರಾಜನೇ, ನೀನು ಒಳ್ಳೆಯ ಉದಾರನಾಗಿರುವುದು ಮಾತ್ರವಲ್ಲದೆ ಪುಣ್ಯಕಾರ್ಯಗಳ ಮೇಲೆ ಒಳ್ಳೆಯ ಆಸಕ್ತಿಯುಳ್ಳವನಾಗಿಯೂ ಕಾಣುವೆ. ಪುಣ್ಯಕಾರ್ಯಗಳು ಮಾಡಿದವರನ್ನು ಮಾತ್ರ ಉದ್ಧರಿಸುವುದಲ್ಲದೆ ಸಮಾಜಕ್ಕೆ ಕೂಡಾ ಒಳ್ಳೆಯದನ್ನೇ ಮಾಡುವಂಥವು. ಆದರೆ ಯಾವ ಪುಣ್ಯಕಾರ್ಯವನ್ನೂ ಮಾಡದವರು, ಒಂದೊಂದುಸಾರಿ ದೇವರ ದಯೆಗೆ ಪಾತ್ರರಾಗಿ ಬಿಡುವುದೆಂದರೆ ಆಶ್ಚರ್ಯವಾಗಿರುತ್ತದೆ. ಇದಕ್ಕೆ ಉದಾಹರಣೆಯಾಗಿ ಒಬ್ಬ ಧನಲೋಭಿ ಮತ್ತು ಒಬ್ಬ ಕೈನುರಿತ ಕಳ್ಳ ಇವರದೊಂದು ಕಥೆ ನೆನಪಾಗುತ್ತಿದೆ. ನಿನಗೆ ನನ್ನ ಭಾರ ಹೊತ್ತು



ಕೊಂಡು ನಡೆಯುವ ಕಷ್ಟ ಉಪಶಮನ ಮಾಡಲು ಆ ಕಥೆಯನ್ನು ಹೇಳುತ್ತೇನೆ. ಮನಸ್ಸು ಕೊಟ್ಟು ಕೇಳು" ಎಂದು ಕಥೆಯನ್ನು ಪ್ರಾರಂಭಮಾಡಿತು.

ಪಾಟಲೀಪುತ್ರ ನಗರದಲ್ಲಿ ಲೋಭಚಂದ್ರನೆಂಬ ಒಬ್ಬ ಧನಿಕನಿಗೆ ಏನೋ ಗುರುತು ತಿಳಿಯದ ರೋಗವೊಂದು ಹತ್ತಿಕೊಂಡಿತು. ಯಾವ ವೈದ್ಯರಿಂದಲೂ ವಾಸಿ ಮಾಡಲಾಗಲಿಲ್ಲ. ಅದೇನು ರೋಗವೆಂದೂ ತಿಳಿಯಲಿಲ್ಲ.

ಒಂದು ದಿನ ಅವನ ಮನೆಗೆ ಒಬ್ಬ ಸಾಧು ಬಂದು ಲೋಭಚಂದ್ರನನ್ನು ನೋಡಿ, "ನೀನು ಧನದ ಮೇಲಿನ ವ್ಯಾಮೋಹದಿಂದ ಯಾವ ಪುಣ್ಯಕಾರ್ಯಗಳನ್ನೂ ಮಾಡಿಲ್ಲ. ಅದರ ಮೇಲೆ ನೀನು ಅನೇಕ ಪಾಪಕಾರ್ಯಗಳನ್ನೇ ಮಾಡಿರುವಿ. ಆ ಪಾಪಗಳೇ ನಿನ್ನನ್ನು ಈಗ ಹೀಗೆ ವ್ಯಾಧಿರೂಪದಲ್ಲಿ ಪೀಡಿಸುತ್ತಾ ಇದೆ. ಪುಣ್ಯಕಾರ್ಯದ ಹೊರತು ಯಾವ ಮದ್ದೂ ನಿನ್ನ ವ್ಯಾಧಿಯನ್ನು ಗುಣಪಡಿಸಲಾರದು. ಇನ್ನು ಮೇಲಾದರೂ ಪುಣ್ಯಕಾರ್ಯಗಳನ್ನು ಮಾಡು" ಎಂದು ಹೇಳಿದನು.

"ಪುಣ್ಯಕಾರ್ಯಗಳೆಂದರೆ ಏನೆಂಬುದನ್ನು ನೀವೇ ಸ್ವಲ್ಪ ವಿವರಿಸಿ ಹೇಳಬೇಕು ಸ್ವಾಮಿ" ಎಂದನು ಲೋಭಚಂದ್ರ.

"ಮನಃಪೂರ್ವಕವಾಗಿ ಅಂದರೆ ಆತ್ಮ ಪ್ರೇರಣೆಯಂತೆ ಮಾಡುವ ಕಾರ್ಯಗಳೆಲ್ಲಾ ಪುಣ್ಯಕಾರ್ಯಗಳೆನಿಸುತ್ತವೆ. ಅಂತಹದು ನಿನಗೇ ತಿಳಿಯುತ್ತದೆ. ಇದಕ್ಕಿಂತ ಹೆಚ್ಚು ಹೇಳಲಿಕ್ಕೆ ಏನೂ ಇಲ್ಲ" ಎಂದು ಹೇಳಿ ಸಾಧು ಹೊರಟುಹೋದನು.

ಆಗ ಲೋಭಚಂದ್ರನ ಕುಟುಂಬ ಸಭ್ಯರೆಲ್ಲರೂ ಅವನ ಹತ್ತಿರ ಬಂದು ಸೇರಿದರು. ಅವನಿಗೆ ಇಬ್ಬರು ಮಗಂದಿರೂ, ಇಬ್ಬರು ಮಗಳಂದಿರೂ ಇರುವರು. ಸಾಧುವಿನ ಮಾತು ಅವರೂ ಕೇಳಿದ್ದರು.

"ಅನ್ನದಾನ ಮಾಡೋಣ" ಎಂದಳು ಲೋಭಚಂದ್ರನ ಹೆಂಡತಿ.

"ಅನ್ನದಾನವೆಂದರೆ ಇನ್ನೊಬ್ಬರಿಗೆ ತೃಪ್ತಿಯಾಗುವ ಹಾಗೆ ಭೋಜನವಿಡಬೇಕು. ನಮ್ಮ ಮನೆಯ ಊಟ ನಮಗೇ ತೃಪ್ತಿಕರವಾಗಿರುವುದಿಲ್ಲ. ಹಾಗಿರುವಾಗ ಇನ್ನೊಬ್ಬರಿಗೆ ತೃಪ್ತಿಯಾಗುವ ಹಾಗೆ ಊಟ ಬಡಿಸಲು ಸಾಧ್ಯವಾಗದು. ಆತ್ಮ ಸಾಕ್ಷಿ ಕೂಡಾ ಇದನ್ನು ಒಪ್ಪಲಾರದು. ಇನ್ನೇನಾದರೂ ಪುಣ್ಯಕಾರ್ಯವಿದ್ದರೆ ಹೇಳಿರಿ" ಎಂದನು. ಲೋಭಚಂದ್ರ.

ಅಲ್ಲಿರುವವರೆಲ್ಲರೂ ತಲಾ ಒಂದೊಂದು ಸೂಚನೆ ಕೊಡತೊಡಗಿದರು. ಒಬ್ಬರು ವಸ್ತ್ರದಾನವೆಂದರೆ, ಇನ್ನೊಬ್ಬರು ವಿದ್ಯಾದಾನ ಒಳ್ಳೆಯದೆಂದರು. ಮತ್ತೊಬ್ಬರು ಕನ್ಯಾದಾತರಿಗೆ ಸಹಾಯ ಮಾಡುವುದು ಒಳ್ಳೆಯ ಪುಣ್ಯಕಾರ್ಯವೆಂದರು. ಹಣವನ್ನೇ ಚಿಲ್ಲರೆ ಮಾಡಿಟ್ಟುಕೊಂಡು ಎಲ್ಲರಿಗೂ ದಾನ ಮಾಡುವುದು ಸುಲಭವೂ

ದೊಡ್ಡ ಪುಣ್ಯವೂ ಎಂದರು ಬೇರೊಬ್ಬರು. ಕಡೆಗೆ ಲೋಭಚಂದ್ರನ ಹೆಂಡತಿ ಚಂದ್ರಾವತೀ ದೇವಿ, "ಹೋಗಲೀಂದ್ರೆ. ತೀರ್ಥಯಾತ್ರೆ ಮಾಡಿ ಬರುವುದು ಒಳ್ಳೆಯ ಪುಣ್ಯಕಾರ್ಯವೆಂದು ನನಗೆ ಕಾಣುತ್ತದೆ. ಎಲ್ಲಾ ದೇವರುಗಳನ್ನೂ ನೋಡಿ ಬರುವುದಕ್ಕಿಂತ ದೊಡ್ಡ ಪುಣ್ಯಕಾರ್ಯ ಬೇರೆ ಏನಿದ್ದೀತು ?" ಎಂದಳು.



ಅದನ್ನು ಕೇಳಿ ಲೋಭಚಂದ್ರನು "ದೇವರನ್ನು ನೋಡಲು ತೀರ್ಥಯಾತ್ರೆ ಮಾಡುವ ಅಗತ್ಯ ವೇನಿದೆ ? ಬೇರೆ ಬೇರೆ ಹೆಸರಿನಲ್ಲಿ ಎಷ್ಟು ದೇವರಿದ್ದರೂ ಅದೆಲ್ಲಾ ಒಬ್ಬನೇ ದೇವನ ಹೆಸರೆಂದು ನಮ್ಮ ಶಾಸ್ತ್ರ ಹೇಳುತ್ತದಷ್ಟೆ ? ಆದುದರಿಂದ ನೀವೆಲ್ಲರೂ ಪ್ರತಿದಿನಾ ನಮ್ಮ ಊರಿನ ಆಲಯ ದಲ್ಲಿರುವ ರಾಮನನ್ನು ಪ್ರದಕ್ಷಿಣೆ ಮಾಡಿ ಪೂಜಿಸಿ ನನ್ನ ರೋಗ ವಾಸಿಮಾಡುವಂತೆ ಪ್ರಾರ್ಥಿಸಿ ಬನ್ನಿರಿ. ಆ ಪುಣ್ಯವೇ ಸಾಕು ನನಗೆ" ಎಂದನು.

ಹಣ ಖರ್ಚುಮಾಡಲು ಇಷ್ಟವಿಲ್ಲದೆಯೇ ಲೋಭಚಂದ್ರನು ಹಾಗೆ ಹೇಳುವನೆಂದು ಎಲ್ಲರಿಗೂ ಅರ್ಥವಾಯಿತು. ಅವನ ಮಾತಿಗೆ ಪ್ರತಿ ಹೇಳ ಲಾಗದೆ ಎಲ್ಲರೂ ಹಾಗೇ ಆಗಲೆಂದರು.

ಕೆಲವು ದಿನಗಳವರೆಗೆ ಹಾಗೆ ಸಾಗುತ್ತಿರಲು, ಲೋಭಚಂದ್ರನ ಆರೋಗ್ಯದಲ್ಲಿ ಯಾವ ಬದಲಾವಣೆ ಯಾದುದೂ ಕಾಣಲಿಲ್ಲ. ರೋಗದ ಉಪಟಳ ಸ್ವಲ್ಪ ಕೂಡಾ ತಗ್ಗಲಿಲ್ಲ.

"ಆ ಸಾಧು ಹೇಳಿದ ಮಾತು ಸುಳ್ಳು. ವ್ಯಾಪಾರದ ಗೊಡವೆಯಲ್ಲೇ ಕಾಲ ಕಳೆದ ನಾನು ದೇವರ ನೆನಪೇ ಇಲ್ಲದವನಾಗಿದ್ದೆನು. ಅದೇ ನಾನು ಮಾಡಿದ ಪಾಪ. ಈಗ ದಿನಾ ನಾನು ದೇವರನ್ನು ನೆನೆದು ಕೊಂಡಿದ್ದೇನೆ. ಇದಕ್ಕಿಂತ ಹೆಚ್ಚಿನ ಪುಣ್ಯಕಾರ್ಯ ವೇನಿದೆ ? ಆದ್ದರಿಂದ ನನ್ನ ರೋಗಕ್ಕೆ ಕಾರಣ ಪಾಪಗಳೇನಲ್ಲ. ನನ್ನ ದುರದೃಷ್ಟ, ಅಷ್ಟೇ" ಎಂದು ಲೋಭಚಂದ್ರನು ದಿನಾ ತನ್ನವರೊಂದಿಗೆ ಬಹಳ ಬೇಸರದಿಂದ ಹೇಳಲಾರಂಭಿಸಿದನು.

ಲೋಭಚಂದ್ರನ ಮನೆಯಲ್ಲಿ ಅಪಾರ ಧನ ಸಂಪತ್ತು ಅಡಗಿರುವುದೆಂಬುದನ್ನು ಕಂಡುಹಿಡಿದ ಕಳ್ಳನೊಬ್ಬನಿದ್ದನು. ಲೋಭಚಂದ್ರನ ಆರೋಗ್ಯವು ಚೆನ್ನಾಗಿದ್ದು ಬಿಟ್ಟರೆ ಆ ಮನೆಯೊಳಗೆ ನುಸುಳುವ ಅವಕಾಶ ಸಿಗಲಾರದು. ಈಗ ಸ್ವಲ್ಪ ಬುದ್ಧಿವಂತಿಕೆ ಯನ್ನು ವೆಚ್ಚಮಾಡಿಬಿಟ್ಟರೆ ಆ ಮನೆಯೊಳಗೆ ಹೊಕ್ಕು ಕಳವು ಮಾಡಬಹುದೆಂದು ಕಳ್ಳನಿಗೆ ತೋರಿತು. ಅದಕ್ಕೊಂದು ಹಂಚಿಕೆ ಹಾಕಿದನು.

ಅದರಂತೆ ಅವನು ಎರಡು ದಿನ ರಾತ್ರಿಯಲ್ಲಿ ಲೋಭಚಂದ್ರನ ಮನೆಗೆ ಹೋದನು. ಅಲ್ಲಿ ಉಪಯೋಗಿಸುವ ಯಾವ ವಸ್ತುಗಳನ್ನೂ ಕಳ್ಳತನ ಮಾಡದೆ, ತಾನು ಬಂದು ಹೋದ ಜಾಡುಗಳು ಮಾತ್ರ ಆ ಮನೆಯವರು ಗುರುತಿಸುವಂತೆ ಮಾಡಿಟ್ಟನು.



ತಮ್ಮ ಮನೆಗೆ ಯಾವನೋ ಕಳ್ಳನು ಬಂದು ಹೋಗುತ್ತಿದ್ದಾನೆಂದು ಲೋಭಚಂದ್ರನ ಹೆಂಡತಿ ಕಂಡುಹಿಡಿದು, ಆ ಸಂಗತಿಯನ್ನು ಮಕ್ಕಳ ಹತ್ತಿರ ಹೇಳಿ, "ಈ ಸಂಗತಿಯನ್ನು ನಿಮ್ಮ ತಂದೆಗೆ ತಿಳಿಸಬೇಡಿರಪ್ಪಾ. ಅವರಿರುವ ಅನಾರೋಗ್ಯದ ಪರಿಸ್ಥಿತಿಯಲ್ಲಿ ಈ ಸಂಗತಿ ಗೊತ್ತಾಗಿಬಿಟ್ಟರೆ ಏನಾದರೂ ವಿಪರೀತವಾದೀತು" ಎಂದು ಎಚ್ಚರಿಕೆ ಹೇಳಿದಳು.

ಆದರೆ ಮೂರನೇ ದಿನ ಆ ಕಳ್ಳ ಸಾಧುವಿನ ವೇಷದಲ್ಲಿ, ಹಗಲು ಹೊತ್ತಿನಲ್ಲೇ ಲೋಭಚಂದ್ರನ ಮನೆಗೆ ಬಂದು, "ಅಯ್ಯಾ ಲೋಭಚಂದ್ರಾ, ನೀನೂ ನಿನ್ನ ಕುಟುಂಬವೂ ದೊಡ್ಡ ಅಪಾಯದ ಅಂಚಿನಲ್ಲಿರುವಿರಿ. ಇದನ್ನು ನಿನಗೆ ಹೇಳಬೇಕೆಂತಲೇ ಬಂದೆನು" ಎಂದನು.

"ಅದೇನು ಸ್ವಾಮೀ, ಅಂಥಾದ್ದು ?" ಎಂದನು ಲೋಭಚಂದ್ರ ಗಾಬರಿಯಿಂದ.

"ಲಕ್ಷ್ಮಿಯ ಸ್ವಭಾವವು ಬಹಳ ಚಂಚಲವಾದುದು. ಬಹಳ ಕಾಲದಿಂದ ನಿನ್ನ ಮನೆಯೊಳಗೇ ಬಂಧನದಲ್ಲಿದ್ದಾಳೆ. ಈಗ ಬೇರೆ ಕಡೆಗೆ ಹೋಗಲು ತಯಾರಾಗಿದ್ದಾಳೆ. ಅದಕ್ಕೆ ಅವಳು ಎರಡು ಪ್ರಯತ್ನಗಳನ್ನು ಮಾಡಿ, ಮನಸ್ಸೊಪ್ಪದೆ ನಿಂತುಬಿಟ್ಟಿದ್ದಾಳೆ. ಇತ್ತೀಚೆಗೆ ಎರಡು ಸಾರಿ ನಿಮ್ಮ ಮನೆಯಲ್ಲಿ ಕಳ್ಳತನಕ್ಕೆ ಪ್ರಯತ್ನ ನಡೆದಿದೆ. ನಿಮಗೂ ಗೊತ್ತಿರಬಹುದಷ್ಟೆ ?" ಎಂದನು ಕಳ್ಳ ಸಾಧು.

ಇದನ್ನು ಕೇಳಿ ಲೋಭಚಂದ್ರನು ಆಶ್ಚರ್ಯ ಪಡುತ್ತಾ, ಹೆಂಡತಿ ಮಕ್ಕಳನ್ನು ಕೇಳಲು, ಅವರು ಸಾಧು ಹೇಳಿದ್ದು ನಿಜವೆಂದು ಒಪ್ಪಿಕೊಂಡರು.

ಅದನ್ನು ಕೇಳಿ ಲೋಭಚಂದ್ರನು ತುಂಬ ಹೆದರಿ ಸಾಧುವಿನೊಂದಿಗೆ, "ಸ್ವಾಮೀ, ಲಕ್ಷ್ಮಿಯನ್ನು ನಮ್ಮ ಮನೆಯೊಳಗೇ ನಿಲ್ಲಿಸಲು ಮಾರ್ಗವೇನಾದರೂ ಇದೆಯೆ ?" ಎಂದು ಕೇಳಿದನು.

"ಇಲ್ಲದೇ ಏನು ? ಪಂಚಭಕ್ಷ್ಯ ಪರಮಾನ್ನಗಳಿಂದ ದಿವ್ಯವಾದ ಭೋಜನವನ್ನು ನನಗೇ ಕೊಡಬೇಕು. ಆಮೇಲೆ ನಾನು ಲಕ್ಷ್ಮಿಯ ಉಪಾಸನೆ ಮಾಡುತ್ತೇನೆ. ಅದೆಲ್ಲಾ ಮುಗಿದ ಮೇಲೆ ನಾನು ಕೊಡುವ ತೀರ್ಥ ಪ್ರಸಾದವನ್ನು ತೆಗೆದುಕೊಳ್ಳಬೇಕು. ಆಗ ಸಂತೃಪ್ತಳಾದ ಲಕ್ಷ್ಮಿ ಮತ್ತೆ ಎಂದಿಗೂ ಹೊರಟುಹೋಗುವ ಆಲೋಚನೆ ಬಿಟ್ಟು, ಬಹು ಸಂತೋಷದಿಂದ ಶಾಶ್ವತವಾಗಿ ಈ ಮನೆಯಲ್ಲೇ ಬಿದ್ದಿರುತ್ತಾಳೆ" ಎಂದನು ಕಳ್ಳ ಸಾಧು.

ಲೋಭಚಂದ್ರನು ಅದಕ್ಕೆ ಒಪ್ಪಿಕೊಂಡನು. ಆ ದಿನ ರಾತ್ರಿ ಚಂದ್ರಾವತಿದೇವಿ ಉತ್ತಮವಾದ ಔತಣದ ಅಡಿಗೆ ಮಾಡಿಸಿ ಕಳ್ಳನಿಗೆ ಸ್ವತಃ ಬಡಿಸಿದಳು. ಅದಾದ ಮೇಲೆ ಕಳ್ಳಸಾಧು ಲಕ್ಷ್ಮೀಪೂಜೆ ಮಾಡಿ, ಎಲ್ಲರಿಗೂ ತೀರ್ಥಪ್ರಸಾದ ಕೊಟ್ಟನು. ಅದರಲ್ಲಿ

ಮಯಕದ ಮದ್ದು ಬೆರೆಸಿದ್ದರಿಂದ ಅವರೆಲ್ಲರೂ ಸ್ಮೃತಿತಪ್ಪಿ ಅಲ್ಲಲ್ಲೇ ಬಿದ್ದರು.

ಆಗ ಕಳ್ಳನು ಲೋಭಚಂದ್ರನ ತಲೆದಿಂಬಿನಡಿಯಲ್ಲಿದ್ದ ಕಬ್ಬಿಣದ ಪೆಟ್ಟಿಗೆಯ ಬೀಗದ ಕೈಯನ್ನು ಎತ್ತಿಕೊಂಡು, ಅದನ್ನು ತೆರೆದನು. ಅದರೊಳಗಿದ್ದ ನಗಗಳನ್ನೂ, ಬಂಗಾರ ಮತ್ತು ಬೆಳ್ಳಿಗಳ ನಾಣ್ಯಗಳನ್ನೂ ನೋಡಿ ಅವನ ಕಣ್ಣುಗಳು ಕೋರೈಸಿ ಹೋದುವು. ತಾನು ಕೊಟ್ಟ ಮಯಕದ ಮದ್ದು ಎಲ್ಲರಲ್ಲಿಯೂ ಸರಿಯಾದ ಪರಿಣಾಮ ಮಾಡಿದೆಯೋ ಎಂಬುದನ್ನು ದೃಢಪಡಿಸಲು ಎಲ್ಲರ ಮುಖಗಳನ್ನೂ ಪರೀಕ್ಷಿಸಿ ನೋಡಿದನು.

ಆಗ ಚಂದ್ರಾವತಿಯ ಮುಖವನ್ನು ನೋಡಿದ ಕೂಡಲೇ ಅವನ ಎದೆ ಧಸಕ್ಕೆಂದಿತು. ಅವಳು ತನ್ನನ್ನು ಹೆತ್ತ ತಾಯಿಯ ಹಾಗೆ ಆದರಿಸಿ ಊಟ ಬಡಿಸಿದ ದೃಶ್ಯ ಅವನ ಕಣ್ಣಿಗೆ ಕಟ್ಟಿತು.

"ಅಯ್ಯೋ! ನನ್ನ ಮೇಲೆ ಎಷ್ಟು ಅಭಿಮಾನವಿಟ್ಟು ಒತ್ತಾಯಮಾಡಿ ತೃಪ್ತಿಯಾಗುವ ಹಾಗೆ ಊಟ ಬಡಿಸಿದ ಈ ತಾಯಿಯ ಮನೆಯಲ್ಲಿ ಕದ್ದುಕೊಂಡು ಓಡಿ ಈಕೆಯ ಹೊಟ್ಟೆ ಹೇಗೆ ಉರಿಸಲಿ? ಸಾಧ್ಯವಿಲ್ಲ!" ಎಂದುಕೊಂಡನು ಕಳ್ಳ.

ಅವನು ಕಬ್ಬಿಣದ ಪೆಟ್ಟಿಗೆಯನ್ನು ಮುಚ್ಚಿ ಬೀಗ ಹಾಕಿ, ಬೀಗದ ಕೈಗಳನ್ನು ಲೋಭಚಂದ್ರನ ತಲೆದಿಂಬಿನ ಅಡಿಯಲ್ಲೇ ಇಟ್ಟು, ಅಲ್ಲಿಂದ ಹೋಗಿಬಿಡಬೇಕೆಂದು ನೋಡಿದನು. ಆದರೆ ಮನೆಯಲ್ಲಿರುವವರೆಲ್ಲಾ ಸ್ಮೃತಿಯಿಲ್ಲದೆ ಬಿದ್ದಿರುವುದನ್ನು ನೋಡಿ ಅಲ್ಲೇ ನಿಂತನು. ಆ ಸಮಯದಲ್ಲಿ ಬೇರೆ ಯಾವ ಕಳ್ಳನಾದರೂ ಮನೆಯೊಳಗೆ ಹೊಕ್ಕು ದೋಚಿಕೊಂಡು ಹೋಗಬಹುದಷ್ಟೆ?

ಆದುದರಿಂದ ಅವನು ರಾತ್ರಿ ಪೂರಾ ನಿದ್ದೆ ಮಾಡದೆ ಮನೆಯನ್ನು ಕಾಯುತ್ತ ಕುಳಿತನು. ಬೆಳಬೆಳಗಾಗುತ್ತಿರಲು ಎಲ್ಲರಿಗಿಂತ ಮೊದಲು



ಚಂದ್ರಾವತಿದೇವಿ ಎದ್ದಳು. ಅವಳು ಕಳ್ಳಸಾಧುವನ್ನು ನೋಡಿ ನಮಸ್ಕರಿಸಲು ಬಂದಳು. ಆಗ ಕಳ್ಳಸಾಧು ತನ್ನ ಕಥೆಯನ್ನೆಲ್ಲಾ ಅವಳ ಹತ್ತಿರ ಹೇಳಿ, "ಈಗ ಅಮ್ಮಾ, ನನ್ನ ಗುಣ ಬದಲಾವಣೆಯಾಗಿದೆ. ಎಲ್ಲಿಯಾದರೂ ಕೆಲಸ ಸಿಕ್ಕಿದರೆ ಕಳ್ಳತನವನ್ನು ಬಿಟ್ಟುಬಿಡುತ್ತೇನೆ" ಎಂದನು.

ಚಂದ್ರಾವತಿ ಅವನ ಪ್ರಾಮಾಣಿಕತನಕ್ಕೆ ಆಶ್ಚರ್ಯಪಡುತ್ತಾ, "ಈ ಸಂಗತಿ ನನ್ನ ಯಜಮಾನರ ಹತ್ತಿರ ಹೇಳಬೇಡ. ಅವರು ನಿನ್ನನ್ನು ಕ್ಷಮಿಸಲಿಕ್ಕಿಲ್ಲ. ಏನೇ ಆದರೂ ನೀನು ಮಾಡಿದ ಲಕ್ಷ್ಮೀಪೂಜೆ ನಿನ್ನಿಂದಲೇ ಆಗಿ ಈ ಮನೆಯನ್ನು ಕಾಪಾಡಿತಷ್ಟೆ? ಆದುದರಿಂದ ನೀನು ನಿಜವಾದ ಸಾಧು ಅಲ್ಲವೆಂಬ ಸಂಗತಿ ನನ್ನ ಗಂಡನಿಗೆ ತಿಳಿಯುವ ಅಗತ್ಯವೂ ಇಲ್ಲ" ಎಂದಳು.

ಸ್ವಲ್ಪ ಹೊತ್ತಿಗೆ ಲೋಭಚಂದ್ರನಿಗೆ ಎಚ್ಚರಿಕೆ ಬಂದಿತು. ಅವನು ಮಂಚದಿಂದ ಎದ್ದು ಒಂದುಸಾರಿ

ಮನೆಯೊಳಗೆಲ್ಲಾ ತಿರುಗಾಡಿ ಬಂದು ಹೆಂಡತಿಯೊಂದಿಗೆ, "ಏನಾಶ್ಚರ್ಯ! ನಾನು ಯಾವಾಗಲಿನಂತೆ ಕಷ್ಟವೇನಿಲ್ಲದೆ ಎದ್ದು ತಿರುಗಾಡುತ್ತೇನೆ ಲಕ್ಷ್ಮೀಪೂಜೆ ನನ್ನ ರೋಗವನ್ನು ಕೂಡಾ ಗುಣಪಡಿಸಿಬಿಟ್ಟಿದೆ. ಎಂಥಾ ಸುಖನಿದ್ರೆ ಬಂತು ಗೊತ್ತಾ?" ಎಂದನು ಉತ್ಸಾಹದಿಂದ.

ಅದನ್ನು ಕೇಳಿ ಕಳ್ಳನು "ಅಯ್ಯೋ, ಈ ತಾಯಿ ನಿಜಸಂಗತಿಯನ್ನು ಮುಚ್ಚಿಡಬೇಕೆಂದರೂ ನಾನು ಮುಚ್ಚಿಡಲಾರೆನು. ಲಕ್ಷ್ಮೀಪೂಜೆಯಲ್ಲಿ ಯಾವ ಮಹತ್ವವೂ ಇಲ್ಲ" ಎಂದು ತಾನು ಯಾರು ಏನು ಮಾಡಿದೆನೆಂಬುದನ್ನೆಲ್ಲಾ ಹೇಳಿ ತೀರಿಸಿದನು.

ಬೇತಾಳವು ಇಲ್ಲಿಗೆ ಕಥೆಯನ್ನು ಮುಗಿಸಿ, "ರಾಜಾ, ಲೋಭಚಂದ್ರನು ವ್ಯಾಧಿ ಪೀಡಿತನಾಗಿರುವಾಗ ನೋಡಲು ಬಂದ ಸಾಧು ಅವನ ಹತ್ತಿರ ಮನಃಪೂರ್ವಕವಾಗಿ, ಆತ್ಮಪ್ರೇರಣೆಗೊಪ್ಪುವಂತೆ ಒಳ್ಳೆಯ ಕೆಲಸಮಾಡಿ ಪುಣ್ಯ ಸಂಪಾದಿಸಲು ಹೇಳಿದ್ದನು. ಪುಣ್ಯದ ಹೊರತು ಬೇರೆ ಯಾವುದರಿಂದಲೂ ರೋಗ ವಾಸಿಯಾಗದೆಂತಲೂ ಒತ್ತಿ ಹೇಳಿದ್ದನು. ಆದರೆ ಲೋಭಚಂದ್ರನು ಕಳ್ಳನಿಗೆ ತೃಪ್ತಿಯಾಗಿ ಊಟ ಹಾಕಿಸಿದ್ದು ಲಕ್ಷ್ಮಿಯನ್ನು ತನ್ನ ಮನೆಯಲ್ಲಿ ಉಳಿಸಿಕೊಳ್ಳುವ ಸ್ವಾರ್ಥಕ್ಕಾಗಿಯೇ. ಅದು ಪುಣ್ಯಕಾರ್ಯವಲ್ಲವಷ್ಟೆ? ಹಾಗಿದ್ದೂ ಅವನ ರೋಗವಾಸಿಯಾಗಿದೆ. ಅದಕ್ಕೆ ಕಾರಣವೇನು? ಈ ಸಂದೇಹಕ್ಕೆ ತಕ್ಕ ಉತ್ತರ ತಿಳಿದಿದ್ದೂ ಹೇಳದೆ ಹೋದರೆ ನಿನ್ನ ತಲೆ ನುಚ್ಚುನೂರಾಗಿ ಹೋಗುತ್ತದೆ" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ಅಮೃತವನ್ನು ತಿಳಿದು ಸೇವಿಸಿದರೂ, ತಿಳಿಯದೆ ಸೇವಿಸಿದರೂ ಅಮರತ್ವವು ಸಿದ್ಧಿಸುತ್ತದೆ. ಅದೇ ರೀತಿಯಲ್ಲಿ ಸತ್ಕಾರ್ಯಗಳನ್ನು ಪರರ ಹಿತವನ್ನು ಬಯಸಿ ಮಾಡಿದರೂ ಸ್ವಾರ್ಥದಿಂದ ಮಾಡಿದರೂ ತಪ್ಪದೆ ಪುಣ್ಯಕಾರ್ಯವೇ ಆಗುತ್ತದೆ. ಲೋಭಚಂದ್ರನು ಮನಃಪೂರ್ವಕವಾಗಿ ಆತ್ಮಪ್ರೇರಣೆಗೆ ಒಪ್ಪುವರತೆ ಕಳ್ಳಸಾಧುವಿಗೆ ಪಂಚಭಕ್ಷ್ಯ ಪರಮಾನ್ನಗಳಿಂದ ಹಾಕಿಸಿದ ಊಟವು ಅವನಿಗೆ ಪುಣ್ಯಕಾರ್ಯವೇ ಆಯಿತು. ಅವನ ವ್ಯಾಧಿ ನಿವಾರಣೆಯಾದುದು ಮಾತ್ರವಲ್ಲದೆ ಕಳ್ಳನನ್ನು ಕೂಡಾ ಸನ್ಮಾರ್ಗಕ್ಕೆ ತಿರುಗಿಸಿತು. ಆದುದರಿಂದ ಲೋಭಚಂದ್ರನು ಪುಣ್ಯಕಾರ್ಯ ಮಾಡಲಿಲ್ಲವೆಂಬುದು ಸರಿಯಲ್ಲ."

ಹೀಗೆ ರಾಜನಿಗೆ ಮೌನ ಭಂಗವಾದ ಕೂಡಲೇ ಬೇತಾಳವು ಅವನ ಹೆಗಲಿನಿಂದ ಶವ ಸಮೇತ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡತೊಡಗಿತು.





# ತೀರ್ಥಯಾತ್ರೆ

ದೇವಾವರವೆಂಬೊಂದು ಊರಿನಲ್ಲಿ ಕೇಶವಯ್ಯ ದೊಡ್ಡ ನಗಗಳ ವ್ಯಾಪಾರಿಯಾಗಿದ್ದನು. ಅವನ ಹೆಂಡತಿಯ ಹೆಸರು ಶಾಮಳೆ. ಒಂದು ದಿನ ಅವರಿಬ್ಬರಿಗೂ ತೀರ್ಥಯಾತ್ರೆ ಮಾಡಿಬರಬೇಕೆಂಬ ಕೋರಿಕೆಯುಂಟಾಯಿತು. ಆದಕ್ಕಾಗಿ ಆ ದಂಪತಿಗಳು ಊರೊಳಗಿರುವ ರಾಮಶರ್ಮನೆಂಬ ಪಂಡಿತನೊಂದಿಗೆ ತಮ್ಮ ಸಂಕಲ್ಪವನ್ನು ತಿಳಿಸಿ, ತೀರ್ಥಯಾತ್ರೆಗೆ ಹೊರಡಲು ಒಳ್ಳೆಯ ಮುಹೂರ್ತ ದಿನವನ್ನು ಹೇಳುವಂತೆ ಕೇಳಿಕೊಂಡರು.

ರಾಮಶರ್ಮನು ಒಂದು ಒಳ್ಳೆಯ ಮುಹೂರ್ತ ದಿನವನ್ನು ನೋಡಿ ಹೇಳಿ, "ನಿಮ್ಮ ಆಲೋಚನೆ ಮೆಚ್ಚುವಂತಹುದು. ಈ ಪುಣ್ಯ ಪ್ರಯಾಣದ ಸಮಯದಲ್ಲಿ, ಮನೆ, ಹೊಲ, ಮಕ್ಕಳು, ವ್ಯಾಪಾರ, ಲಾಭನಷ್ಟ ಮುಂತಾದ ಆಲೋಚನೆಗಳನ್ನೂ ಬಿಟ್ಟು, ಯಾವಾಗಲೂ ದೇವರನ್ನೇ ಮನಸ್ಸಿನೊಳಗಿಟ್ಟುಕೊಳ್ಳಿರಿ. ಹಾಗೆ ನಡೆಯದಿದ್ದರೆ ತೀರ್ಥಯಾತ್ರೆಯ ಫಲವು ದಕ್ಕುವುದಿಲ್ಲ. ಮರೆಯಬೇಡಿ" ಎಂದು ಹಿತಬೋಧನೆ ಕೂಡಾ ಮಾಡಿದನು. ಮುಹೂರ್ತದ ದಿನದಲ್ಲಿ ಆ ಗಂಡಹೆಂಡಿರು ಮನೆಯಿಂದ ಹೊರಟು, ಪುಣ್ಯಕ್ಷೇತ್ರಗಳನ್ನು ದರ್ಶಿಸುತ್ತಾ, ಒಂದು ದಿನ ಮಧ್ಯಾಹ್ನದ ಹೊತ್ತಿಗೆ ಒಂದು ನದಿಯ ಹತ್ತಿರ ಹೋದರು. ನದಿಯ ತೀರದಲ್ಲಿ ಮರಗಳು ತುಂಬಿದ ಒಂದು ತೋಟ ವಿದ್ದಿತು. ಶಾಮಳೆ ಒಂದು ಮರದ ನೆರಳಿನಲ್ಲಿ ಕುಳಿತಳು. ಕೇಶವಯ್ಯ ನದಿಯಲ್ಲಿ ಸ್ನಾನಮಾಡಿ ಬರುತ್ತೇನೆಂದು ಹೇಳಿ ಅತ್ತ ಹೋದನು.

ನದಿಯ ಆಚೆಯ ಬದಿಯಲ್ಲಿ ಒಂದು ಪರ್ವತ ಶ್ರೇಣಿಯಿದ್ದಿತು. ಆ ಶ್ರೇಣಿಗಳ ಕಲ್ಲುಗಳಲ್ಲಿ ಆಗಾಗ, ಚಿಕ್ಕ ಚಿಕ್ಕ ಮಣಿಗಳು ದೊರಕುತ್ತವೆಂದು ಕೇಶವಯ್ಯ ಕೇಳಿದ್ದನು. ಅವನು ಸ್ನಾನ ಮಾಡುವಾಗ ಆ ಸಂಗತಿಯನ್ನು ಆಲೋಚಿಸುತ್ತ, ಸ್ನಾನ ಮುಗಿದ ಮೇಲೆ ಹೆಂಡತಿ ಕುಳಿತಿರುವಲ್ಲಿಗೆ ಹೊರಟ.

ಹಾಗೆ ಅವನು ತಿರುಗಿಬರುವ ಸಮಯದಲ್ಲಿ, ಹೆಂಡತಿ ಮರದ ಕಾಂಡಕ್ಕೆ ಒರಗಿ ನಿದ್ದೆ ಮಾಡುತ್ತಿದ್ದಳು. ಅವಳ ಎಡಗೈಗೆ ಸ್ವಲ್ಪ ದೂರದಲ್ಲಿ ಜಗಜಗಿಸುವ ಏನೋ ಒಂದು ವಸ್ತು ಬಿದ್ದಿತ್ತು. ಕೇಶವಯ್ಯ ಆಶ್ಚರ್ಯದಿಂದ ಅದನ್ನು ಎತ್ತಿಕೊಂಡು ನೋಡಿದನು. ಅದೊಂದು ಸಣ್ಣ ಮಣಿ!

ಡಿ. ಸುಬ್ರಹ್ಮಣ್ಯ

ಒಂದೆರಡು ನಿಮಿಷಗಳವರೆಗೆ ಕೇಶವಯ್ಯ ಏನು ಮಾಡುವುದೆಂದು ಆಲೋಚಿಸಿದನು. ತೀರ್ಥ ಯಾತ್ರೆಗೆ ಹೊರಡುವುದಕ್ಕೆ ಮೊದಲು ಪಂಡಿತ ರಾಮಶರ್ಮನು ಹೇಳಿದ ಹಿತಬೋಧನೆ ಅವನ ನೆನಪಿಗೆ ಬಂತು. ಧನಮೋಹವು ಕೂಡದು. ಈ ವಿಷಯದಲ್ಲಿ ತನ್ನದು ವಜ್ರಸಂಕಲ್ಪವಾಗಿದೆ. ಆದರೆ ಹೆಂಡತಿಗೆ ಆ ಮಣಿಯನ್ನು ಸಂಗ್ರಹಿಸಬೇಕೆಂಬ ಬುದ್ಧಿ ಬರಬಹುದು. ಆದುದರಿಂದ ಅದು ಅವಳ ಕಣ್ಣಿಗೆ ಬೀಳದಂತೆ ಮಾಡಿಬಿಡಬೇಕು.

ಹೀಗೆಂದುಕೊಂಡು ಕೇಶವಯ್ಯ ಒಂದು ಚಿಕ್ಕ ಹೊಂಡ ತೆಗೆದು ಮಣಿಯನ್ನು ಅದರೊಳಗೆ ಹಾಕಿ ಗೊತ್ತಾಗದಂತೆ ಮಣ್ಣುಮುಚ್ಚಿದನು.

ಅವಳಿಗೆ ಎಚ್ಚರಾದ ಮೇಲೆ ಗಂಡಹೆಂಡಿರು ಮುಂದೆ ಪ್ರಯಾಣ ಮಾಡಿದರು. ಕೇಶವಯ್ಯ ಹೆಂಡತಿಯೊಂದಿಗೆ "ನಾನು ನದಿಯಲ್ಲಿ ಸ್ನಾನಮಾಡಿ ತಿರುಗಿ ಬಂದ ಮೇಲೆ ನಿನ್ನ ಪಕ್ಕದಲ್ಲಿ ಯಾವುದೋ ಒಂದು ವಸ್ತು ಹೊಳೆಯುತ್ತಿರುವುದನ್ನು ನೋಡಿದೆನು" ಎಂದನು.

"ನೋಡಿದಿರಾ ? ನೀವು ಹೇಳುವುದು ಚಿಕ್ಕದೊಂದು ಮಣಿಯ ಸಂಗತಿ ತಾನೇ ?" ಎಂದು ಕೇಳಿದಳು ಶಾಮಳೆ. ಆ ಪ್ರಶ್ನೆ ಕೇಳಿ ಕೇಶವಯ್ಯನಿಗೆ ಆಶ್ಚರ್ಯವಾಯಿತು.

ಅವನು ಶಾಮಳೆಯನ್ನು ಅನುಮಾನದಿಂದ ನೋಡಿದನು. ಆಮೇಲೆ ಶಾಮಳೆ ಸಾವಧಾನವಾಗಿ "ನನಗೆ ಸ್ವಲ್ಪ ತೂಕಡಿಕೆ ಬಂದಾಗ ಒಂದು ಹದ್ದು ಬಂದು ಮರದ ಕೊಂಬೆಯಲ್ಲಿ ಎರಗಿತು. ಅದರ ಕೊಕ್ಕಿನಲ್ಲಿ ಏನೋ ಹೊಳೆಯುವುದನ್ನು ಗಮನಿಸಿದೆ. ಅಷ್ಟರಲ್ಲಿ ಅದು ಹದ್ದಿನ ಕೊಕ್ಕಿನಿಂದ ಜಾರಿ ನನ್ನ ಬದಿಗೆ ಬಿತ್ತು. ಅದೊಂದು ವಜ್ರದ ಮಣಿ ಎಂದು ಗೊತ್ತಾಯಿತು. ಅಷ್ಟರಲ್ಲಿ ನನಗೆ ನಿದ್ದೆ ಬಂದುಬಿಟ್ಟಿತು" ಎಂದಳು.

"ಆ ಮಣಿಯನ್ನು ತೆಗೆದುಕೊಳ್ಳಬೇಕೆಂದು ನಿನಗೆ ಆಸೆಯಾಗಲಿಲ್ಲವೆ ?" ಎಂದು ಕೇಳಿದನು ಕೇಶವಯ್ಯ.

"ಅಂಥಾ ಆಸೆ ನನಗೇಕೆ ಬಂದೀತು ? ನಾವು ಹೊರಟದ್ದು ಪುಣ್ಯ ಸಂಪಾದಿಸಲಿಕ್ಕೆ ತಾನೇ ? ವಜ್ರಮಣಿಗಳ ಸಂಪಾದನೆಗೆ ಅಲ್ಲವಷ್ಟೆ ? ನಮಗೆ ಈ ತೀರ್ಥಯಾತ್ರೆಯ ಸಮಯದಲ್ಲಿ ಮಣಿಮಾಣಿಕ್ಯಾದಿಗಳು ಮಣ್ಣಿನ ಹೆಂಟೆಗಳಾಗಿ ಕಾಣದಿದ್ದರೆ, ನಮ್ಮ ಪುಣ್ಯ ಸಂಪಾದನೆಗೆ ಅರ್ಥವೇ ಇಲ್ಲ" ಎಂದಳು ಶಾಮಳೆ.

ಅವಳ ಉತ್ತರವನ್ನು ಕೇಳಿದ ಮೇಲೆ ತನ್ನ ಹೆಂಡತಿ ತನಗಿಂತಲೂ ಮೇಲಂತಸ್ತಿನಲ್ಲಿರುವಳೆಂದು ತಿಳಿದು, ಅವಳ ಮೇಲೆ ಮತ್ತಿಷ್ಟು ಆದರಭಾವ ತಾಳಿದನು ಕೇಶವಯ್ಯ.






ನಮ್ಮ ದೇವಾಲಯಗಳು:

## ಕಾಂಚೀಪುರ

ಬ್ರಹ್ಮದೇವನು ಒಂದುಸಾರಿ ಯಜ್ಞ ಮಾಡ
ಬೇಕೆಂದು, ಅದಕ್ಕೆ ಅನುಕೂಲವಾದ ಸ್ಥಳವನ್ನು
ಹುಡುಕುತ್ತ, ಸತ್ಯವ್ರತ ಕ್ಷೇತ್ರವೆಂದು ಪ್ರಸಿದ್ಧಿ
ಪಡೆದ ಕಾಂಚೀಪುರವನ್ನು ನೋಡಿ ಅಲ್ಲಿ ಯಜ್ಞ
ವನ್ನು ಪ್ರಾರಂಭಿಸಿದನು.

ಇದು ಸರಸ್ವತೀದೇವಿಗೆ ಏಕೋ ಇಷ್ಟವಾಗಲಿಲ್ಲ.
ಅವಳು ವೇಗವತೀ ನದಿಯ ರೂಪತಾಳಿ ಯಜ್ಞ
ವಾಟಿಕೆಯನ್ನು ಜಲಮಯವಮಾಡಲು ರಭಸ
ದಿಂದ ಉಕ್ಕಿ ಓಡಿಬರತೊಡಗಿದಳು. ಆಗ
ಮಹಾವಿಷ್ಣು ಅಡ್ಡಗಟ್ಟಿ ಮಲಗಿ ನದಿಯ
ಪ್ರವಾಹವು ಮುಂದೆ ಹೋಗದಂತೆ ತಡೆದನು.





ಅನಂತರ ಬ್ರಹ್ಮದೇವನ ಪ್ರಾರ್ಥನೆಯ ಮೇರೆಗೆ
ಮಹಾವಿಷ್ಣು ಅಲ್ಲಿಯೇ ಭಕ್ತರಿಗೆ ಬೇಡಿದ ವರ
ಗಳನ್ನು ಪ್ರಸಾದಿಸುವ ವರದರಾಜ ಸ್ವಾಮಿ
ಯಾಗಿ ಉಳಿದುಕೊಂಡನು. ಈ ದಿನಗಳಲ್ಲಿ
ಬೆಳಗಿಕೊಂಡಿರುವ ವರದರಾಜ ಸ್ವಾಮಿಯ
ಆಲಯವು ಬಹು ಪುರಾತನವಾದ ಆಲಯಗಳ
ಬುನಾದಿಯ ಮೇಲೆ ನಿರ್ಮಿಸಲ್ಪಟ್ಟಿದೆ.




ಪಲ್ಲವರಾಜನಾದ ರಾಜಸಿಂಹನು ನಿರ್ಮಿಸಿದ ಶ್ರೀ ಕೈಲಾಸನಾಥನ ಆಲಯವು ಅದ್ಭುತ ಶಿಲ್ಪ ಕಲೆಗೆ ಪ್ರಸಿದ್ಧಿ ಪಡೆದಿದೆ. ಗರ್ಭಗೃಹದೊಳಗಿನ ಶಿವಲಿಂಗವು ಹದಿನಾರು ಫಲಕಗಳಿಂದ ತಯಾರಿಸಲ್ಪಟ್ಟಿದೆ. ಆಲಯ ಪ್ರಾಕಾರದ ಸುತ್ತಲೂ ಐವತ್ತೆಂಟು ಚಿಕ್ಕ ದೇವಾಲಯಗಳಿವೆ.

ಮತ್ತೊಬ್ಬ ಪಲ್ಲವರಾಜನಾದ ನಂದಿವರ್ಮ ಪಲ್ಲವಮಲ್ಲನು ನಿರ್ಮಿಸಿದ ಶ್ರೀ ವೈಕುಂಠ ಪೆರುಮಾಳ್ ಆಲಯ ಕೂಡಾ ಬಹಳ ಅದ್ಭುತವಾದ ಕಲೆಗಳ ಖಂಡವೆಂದು ಭಾವಿಸಲ್ಪಡುತ್ತದೆ. ಮೂರು ಅಂತಸ್ತುಗಳಿಂದ ಬೆಳಗುವ ಆಲಯ ವಿಮಾನದಲ್ಲಿ ಮಹಾವಿಷ್ಣು ನಿಂತಿರುವಂತೆ ಕುಳಿತಿರುವಂತೆ, ಶಯನಿಸಿರುವಂತೆ ಮೂರು ಬಗೆಯ ಭಂಗಿಗಳಲ್ಲಿ ಕೆತ್ತಲ್ಪಟ್ಟಿದೆ.





ಇಲ್ಲಿ ಬೆಳಗುತ್ತಿರುವ ಏಕಾಂಬರನಾಥ ಆಲಯವು ಅತಿ ಪ್ರಾಚೀನವಾದುದು. ಒಂದು ಕಾಲದಲ್ಲಿ ಇಲ್ಲಿ ಸಾವಿರ ಕಂಬಗಳ ಮಂಟಪವಿದ್ದಿತು. ಈಗ ಆ ಮಂಟಪದಲ್ಲಿ ಆರುನೂರ ಹದಿನಾರು ಕಂಬಗಳಿವೆ. ಬಹು ವಿಶಾಲವಾದ ಈ ದೇವಾಲಯದ ಪ್ರಾಂಗಣದ ತುಂಬಾ ಎಷ್ಟೋ ಆಲಯಗಳೂ, ಮಂಟಪಗಳೂ, ಗೋಪುರಗಳೂ, ತಟಾಕಗಳೂ ಇವೆ.

ಪಾರ್ವತೀ ಪರಮೇಶ್ವರರ ‘ವಿವಾಹವನ್ನು ನೋಡಲಿಕ್ಕಾಗಿ ದೇವತೆಗಳೂ, ಋಷಿಗಳೂ ಎಲ್ಲರೂ ಕೈಲಾಸವನ್ನು ಸೇರಿದರು. ಆಗ ಪರಮೇಶ್ವರನು ಭಾರತ ಭೂಮಿಯ ಆಧ್ಯಾತ್ಮಿಕ ಭಾರವನ್ನು ಸಮತಲವಾಗಿರಿಸಲು ಅಗಸ್ತ್ಯ ಮುನಿಯನ್ನು ದಕ್ಷಿಣ ದೇಶಕ್ಕೆ ಹೋಗುವಂತೆ ಆದೇಶ ಮಾಡಿದನು.





ಅಗಸ್ತ್ಯನು ಶಿವಾಜ್ಞೆಯನ್ನು ಅಂಗೀಕರಿಸಿ, ತನಗೆ ಶಿವಪಾರ್ವತಿಯರ ವಿವಾಹ ದರ್ಶನದ ಭಾಗ್ಯ ಅನುಗ್ರಹಿಸಬೇಕೆಂದು ಕೇಳಿಕೊಂಡನು. ಅವನ ಪ್ರಾರ್ಥನೆಯನ್ನು ನೆರವೇರಿಸಲಿಕ್ಕಾಗಿ ಪಾರ್ವತೀ ದೇವಿ ಕನ್ಯೆಯಾಗಿ, ಮತ್ತೆ ಕಾಂಚೀಪುರದ ನದೀ ತೀರದಲ್ಲಿ ಪರಮಶಿವನ ಲಿಂಗ ರೂಪವನ್ನು ಪೂಜಿಸಲು ತೊಡಗಿದಳು.

ಪಾರ್ವತೀದೇವಿಯನ್ನು ಹೆದರಿಸುವ ಉದ್ದೇಶದಿಂದ ಶಿವನು ಲಿಂಗವು ಕೊಚ್ಚಿ ಹೋಗುವಂತೆ ಮಾಡಲು ನದಿಯಲ್ಲಿ ನೆರೆ ಏಳುವಂತೆ ಮಾಡಿದನು. ಆದರೆ ಪಾರ್ವತಿ ಶಿವಲಿಂಗವನ್ನು ಹೃದಯದಲ್ಲಿ ಅಪ್ಪಿಕೊಂಡು, ತಾನು ಕೂಡಾ ನೆರೆಯಲ್ಲಿ ಸಿಕ್ಕಿ ಹೊಡೆದುಕೊಂಡು ಹೋಗಲು ಸಿದ್ಧಳಾದಳು. ಆಗ ಶಿವನು ಅಲ್ಲಿ ಪ್ರತ್ಯಕ್ಷನಾಗಿ, ಅವಳನ್ನು ಮದುವೆ ಮಾಡಿಕೊಂಡನು. ಅಗಸ್ತ್ಯನು ಪಾರ್ವತೀ ಪರಮೇಶ್ವರರ ವಿವಾಹವನ್ನು ಆಸೆ ತೀರುವಂತೆ ನೋಡಿ ಆನಂದಿಸಿದನು.





ಈ ಆಲಯ ಪ್ರಾಂಗಣದಲ್ಲಿ ಸಾವಿರ ಸಂವತ್ಸರಗಳಿಗೂ ಹಿಂದಿನ ಮಾವಿನ ಮರವಿರುವುದರಿಂದಲೇ ಇದಕ್ಕೆ ಏಕಾಂಬರನಾಥ ಆಲಯವೆಂಬ ಹೆಸರು ಬಂದಿತೆಂದು ನಂಬಲ್ಪಡುತ್ತದೆ. ನಾಲ್ಕು ವೇದಗಳಿಗೆ ಸಂಕೇತವಾಗಿ ಬೆಳಗುವ ಈ ವೃಕ್ಷವು ನಾಲ್ಕು ಕೊಂಬೆಗಳಿಂದ ನಾಲ್ಕು ಬಗೆಯ ರುಚಿಯುಳ್ಳ ಮಾವಿನಕಾಯಿ ಬಿಡುವುದು ವಿಶೇಷವೆಂದು ಹೇಳಿಕೊಳ್ಳುತ್ತಾರೆ.

ಕಾಂಚೀಪುರವು ನಮ್ಮ ದೇಶದೊಳಗಿನ ಸಪ್ತ ಪುಣ್ಯ ಕ್ಷೇತ್ರಗಳಲ್ಲಿ ಒಂದಾಗಿದೆ. ಆದಿಶಂಕರರು ಇಲ್ಲಿ ಕಾಮಕೋಟಿ ಪೀಠವನ್ನು ಸ್ಥಾಪಿಸಿದ್ದಾರೆ. ಹಜರತ್ ಹಮೀದ್ ಅನಾಲಿಯಾ ಎಂಬ ಮುಸ್ಲಿಂ ಮತಗುರು ಕಾಂಚೀಪುರವನ್ನು ತನ್ನ ನಿವಾಸ ಸ್ಥಾನವಾಗಿ ಆರಿಸಿಕೊಂಡಿದ್ದಾರೆ.





ಒಂದು ಕಾಲದಲ್ಲಿ ಬೌದ್ಧಮತಕ್ಕೆ ಕೂಡಾ ಈ ನಗರವು ಕೇಂದ್ರವಾಗಿ ಬೆಳಗಿಕೊಂಡಿತ್ತು. ಏಳನೇ ಶತಮಾನದಲ್ಲಿ ಹೂಯಾನ್‌ತ್ಸಾಂಗ್ ಎಂಬ ಚೀನಾ ಯಾತ್ರಿಕನು ಈ ನಗರವನ್ನು ಸಂದರ್ಶಿಸಿದನು. ಆಗ ಅವನು ಇಲ್ಲಿ ಅನೇಕ ಬೌದ್ಧಾರಾಮಗಳನ್ನು ದರ್ಶನ ಮಾಡಿದುದನ್ನು ಬರೆದುಕೊಂಡಿದ್ದಾನೆ. ಆದರೆ ಕಾಲ ಪ್ರವಾಹದಲ್ಲಿ ಅವೆಲ್ಲಾ ಕೊಚ್ಚಿ ಹೋಗಿವೆ.



# ಕವಿ ಸನ್ಮಾನ

**ಹಿಂ**ದೆ ವತ್ಸ ದೇಶದಲ್ಲಿ ವಿಶಾಖದತ್ತನು ರಾಜನಾಗಿ ಸಿಂಹಾಸನವೇರಿದ ಮೇಲೆ ದೇಶದಲ್ಲಿ ಕವಿಗಳಿಗೆ ಏನೇನೂ ಆದರಣೆ ಇಲ್ಲದೆ ಹೋಯಿತು. ಅದಕ್ಕೆ ಕಾರಣನಾದವನು ಮಂತ್ರಿಯಾಗಿದ್ದ ಮಂಜುನಾಥನು.

ಕವಿಗಳಿಂದ ಏನು ಪ್ರಯೋಜನವಾದೀತು ? ಕೆಲಸ ಬೊಗಸೆಗಳಿಲ್ಲದ, ಯಾವ ಕೆಲಸಕ್ಕೂ ಕೈಲಾಗದ ಹುಚ್ಚು ಮನಸ್ಸಿನವರು ಕವಿತೆ ಹೇಳಿಕೊಂಡು ದಾಂಭಿಕ ಜೀವನ ನಡೆಸುತ್ತಾರೆಂಬುದು ಆ ಮಂತ್ರಿಯ ಅಭಿಪ್ರಾಯವಾಗಿತ್ತು.

"ಕವಿಗಳನ್ನು ಪೋಷಿಸುವುದು ಕೇವಲ ಹುಚ್ಚು ಕೆಲಸ ! ಶುದ್ಧ ದಂಡ ! ಅದರಿಂದ ಖಜಾನೆ ಖಾಲಿಯಾಗುವುದರ ಹೊರತು ದೇಶಕ್ಕೆ ಎಳ್ಳಿನಷ್ಟು ಕೂಡಾ ಪ್ರಯೋಜನವಿಲ್ಲ. ಅವರಿಗೆ ಪ್ರೋತ್ಸಾಹ ಕೊಡುವುದಕ್ಕೆ ಯಾವ ಅರ್ಥವೂ ಇಲ್ಲ" ಎಂದು ಮಂತ್ರಿ ಆಗಾಗ ರಾಜನೊಡನೆ ಹೇಳುತ್ತಿದ್ದನು.

ವಿಶಾಖದತ್ತನಿಗೆ ಸ್ವತಃ ಕವಿಗಳನ್ನು ಪೋಷಿಸಬೇಕೆಂಬ ಆಸಕ್ತಿ ಮನಸ್ಸಿನೊಳಗೇನೋ ಇದ್ದಿತು. ಕವಿಗಳ ಕೃತಿಗಳಿಂದ ಆನಂದದಿಂದ ಹೋಗುವುದರೊಂದಿಗೆ ಬುದ್ಧಿ ವಿಕಸನವಾಗಿ ಜ್ಞಾನದ ಪ್ರಕಾಶವು ಬರುವುದನ್ನು ಅವನು ತಿಳಿದಿದ್ದನು.

ಆದರೆ ವಯೋವೃದ್ಧನಾಗಿ ಅನೇಕ ಸಂದರ್ಭದಲ್ಲಿ ತನಗೆ ಒಳ್ಳೆಯ ಸಲಹೆಗಳನ್ನು ಕೊಟ್ಟು ಸಹಾಯಕನಾಗಿರುವ ಹಿರಿಯನಾದ ಮಂತ್ರಿಯ ಮಾತನ್ನು ಅಲ್ಲಗಳೆಯಲು ಸಂಕೋಚಪಡುತ್ತಿದ್ದನು. ಅವನಿಗಿಂತ ದೊಡ್ಡವರಾರಾದರೂ ಈ ಮಂತ್ರಿಗೆ ಹೇಳುತ್ತಿದ್ದರೆ ಒಳ್ಳೆಯದಿತ್ತು, ಎಂದುಕೊಳ್ಳುತ್ತಿದ್ದನು.

ಒಂದುಸಾರಿ ವಿಶಾಖದತ್ತನು ಬಳಿಗೆ ಯುವಕನೂ ಸ್ಫುರದ್ರೂಪಿಯೂ ಆದ ಚಾಂದ್ರಾಯಣನೆಂಬ ಕವಿ ಬಂದು ರಾಜನಿಗೆ ತನ್ನ ಹೆಸರು ಹೇಳಿಕೊಂಡು, "ಮಹಾ ಪ್ರಭೂ, ನಾನು ತಮ್ಮ ತಾತನವರ ಹತ್ತಿರ ಆಸ್ಥಾನ ಕವಿಯಾಗಿದ್ದ ಸುಧಾಕರ ಭಟ್ಟಾರಕರ ಮೊಮ್ಮಗನು, ಈಗ ರಾಜಾದರಣೆಯಿಲ್ಲದೆ ಬಹಳ ಹೀನಸ್ಥಿತಿ ಬಂದಿದೆ. ನಮ್ಮ ತಾತನ ಹಾಗೆಯೇ ನಾನು ಕೂಡಾ ಕವಿತೆ ಹಾಡಬಲ್ಲೆನು. ಏಕ ಕಾಲದಲ್ಲಿ ಅಷ್ಟಾವಧಾನ, ಶತಾವಧಾನ ಕೂಡಾ ಮಾಡುತ್ತೇನೆಂಬುದು ನನ್ನ ಪ್ರತ್ಯೇಕತೆಯಾಗಿದೆ. ತಮ್ಮ ಮುಂದೆ ನನ್ನ ವಿದ್ಯೆಯನ್ನು ಪ್ರದರ್ಶಿಸಿ

ಜಿ. ಜಿ. ರತ್ನ



ಎಷ್ಟೆಂಬುದು ನಮಗೆಲ್ಲಾ ಗೊತ್ತಿಲ್ಲದ್ದಲ್ಲ. ಮರದ ಹೆಸರನ್ನು ಹೇಳಿ ಕಾಯಿಗಳನ್ನು ಮಾರುವುದು ಲೋಕದವರ ಸಹಜ ಗುಣ. ನೀನು ಒಳ್ಳೆಯ ವಯಸ್ಸು, ದೇಹ ದಾರ್ಢ್ಯತೆಯುಳ್ಳ ಯುವಕನು. ಹೀಗೆ ಕವಿತ್ವವನ್ನು ನಂಬಿಕೊಂಡಿರುವುದನ್ನು ಬಿಟ್ಟು, ಬೇರೇನಾದರೂ ಅಭಿವೃದ್ಧಿಗೆ ತಕ್ಕ ಬುದ್ಧಿವಂತಿಕೆಯ ಕೆಲಸಮಾಡಿ ಬದುಕಲು ಏಕೆ ಪ್ರಯತ್ನಿಸಬಾರದು ?" ಎಂದು ಪ್ರಶ್ನೆ ಮಾಡಿದನು.

ಒಂದು ದೇಶದ ಮಂತ್ರಿ ಹೀಗೆ ಮಾತಾಡುವುದನ್ನು ಕೇಳಿ, ಚಾಂದ್ರಾಯಣನು ಕ್ಷಣಕಾಲ ಬೆರಗಾಗಿ ಕೂಡಲೇ ಸಮಾಳಿಸಿಕೊಂಡು, "ನಾನು ಉದರ ಪೋಷಣೆಗಾಗಿ ರಾಜಾಶ್ರಯವನ್ನು ಕೋರಿ ಬಂದೆನೆಂಬುದು ನಿಜವೇ. ಕವಿತ್ವ ಹೇಳುವುದು ನನ್ನ ಪ್ರತ್ಯೇಕ ಅರ್ಹತೆಯಾದುದರಿಂದ, ಅದು ನನಗೆ ರಾಜಾಶ್ರಯ ನೀಡಬಹುದೆಂದು ಅಂದುಕೊಂಡಿದ್ದೆನು. ಹಾಗಾಗದೆ, ಮಹಾರಾಜರು ಬೇರೆ ವಿಧದಲ್ಲಿ ಯಾದರೂ ಆಸ್ಥಾನದಲ್ಲಿ ಆಶ್ರಯ ಕಲ್ಪಿಸುವೆನೆಂದರೆ ರಾಜಾದರಣೆ ಸಂತೋಷಿಸುತ್ತ ಅದಕ್ಕೆ ನಾನು ಸಿದ್ಧನಾಗಿದ್ದೇನೆ" ಎಂದನು.

ವಿಶಾಖದತ್ತನು ಚಾಂದ್ರಾಯಣನ ವಿನಯಕ್ಕೆ ಸಂತೋಷಪಟ್ಟು, ಮಂತ್ರಿ ಮಂಜುನಾಥನನ್ನು ಸಮಾಧಾನಪಡಿಸುವಂತೆ, "ಮಹಾಮಂತ್ರೀ ! ಕಷ್ಟದಲ್ಲಿರುವ ಈ ಹುಡುಗ ನಮ್ಮ ಆಸ್ಥಾನದ ಆಶ್ರಯವನ್ನು ಕೇಳುತ್ತಿದ್ದಾನೆ. ನಾವು ಇವನ ತಾತನವರ ಮೇಲೆ ಇಟ್ಟಿರುವ ಗೌರವಕ್ಕಾದರೂ ಏನಾದರೂ ಉದ್ಯೋಗ ಕೊಡಬಹುದೋ ಆಲೋಚನೆ ಮಾಡಬೇಕು. ಏನನ್ನುವಿರಿ ? ಯಾವ ಉದ್ಯೋಗದಲ್ಲಿ ಇವನನ್ನು ನಿಯಮಿಸೋಣ ?" ಎಂದನು.

ಮಂಜುನಾಥ ಮಂತ್ರಿ ಕ್ಷಣಕಾಲ ಆಲೋಚಿಸಿ, "ಪ್ರಭುವಾಜ್ಞೆ ! ಒಂದು ವಾರದ ಕೆಳಗೆ ನಮ್ಮ ಅಶ್ವಶಾಲೆಯಲ್ಲಿ ಕುದುರೆಗಳನ್ನು ತೊಳೆಯುವವನು

ತಮ್ಮ ಆಶ್ರಯ ಪಡೆಯಬೇಕೆಂದು ಬಂದಿದ್ದೇನೆ. ತಮ್ಮ ಆಶ್ರಯ ಸಿಕ್ಕುವುದೆಂಬ ನಂಬುಗೆಯಲ್ಲಿದ್ದೇನೆ" ಎಂದನು.

ಒಂದು ಕಾಲದಲ್ಲಿ ತಮ್ಮ ರಾಜ್ಯಕ್ಕೆ ದೊಡ್ಡ ಕೀರ್ತಿ ಪ್ರತಿಷ್ಠೆಗಳನ್ನು ಸಂಪಾದಿಸಿಕೊಟ್ಟ ಸುಧಾಕರ ಭಟ್ಟಾರಕರ ಕುಟುಂಬವು ಬಹಳ ದೀನಾವಸ್ಥೆಯಲ್ಲಿರುವುದನ್ನು ತಿಳಿದು ವಿಶಾಖದತ್ತ ರಾಜನ ಮನಸ್ಸು ತುಂಬ ನೊಂದುಕೊಂಡಿತು. ಎಷ್ಟೋ ರಾಜ ವಿಶ್ವಾಸದಿಂದ ರಾಜಸಭೆಯಲ್ಲಿ ತನ್ನ ಪ್ರಜ್ಞೆಯನ್ನು ಪ್ರದರ್ಶಿಸುವೆನೆನ್ನುತ್ತ ನಿಂತಿರುವ ಆ ಯುವಕನನ್ನು ನೋಡಿದ ಕೂಡಲೇ ಮಂತ್ರಿ ಏನು ಹೇಳುವನೋ ಎಂದು ಅವನ ಮೈ ಬೆವತಿತು.

ವಿಶಾಖದತ್ತ ರಾಜನು ಚಾಂದ್ರಾಯಣನೊಂದಿಗೆ ಏನೋ ಹೇಳಬೇಕೆಂದಿರಲು, ಮಂತ್ರಿ ಮಂಜುನಾಥನು ತಡೆದು ಚಾಂದ್ರಾಯಣನನ್ನು ನೋಡಿ, "ಸುಧಾಕರ ಭಟ್ಟಾಚಾರ್ಯರ ದೊಡ್ಡತನವು

ಇದ್ದಕ್ಕಿದ್ದ ಹಾಗೆ ಸತ್ತು ಹೋದನಷ್ಟೆ ? ಅವನ ಸ್ಥಾನವನ್ನು ಇನ್ನೂ ಭರ್ತಿಮಾಡಲಿಲ್ಲ. ಅಭ್ಯಂತರವಿಲ್ಲದಿದ್ದರೆ ಇವನನ್ನು ಆ ಕೆಲಸಕ್ಕೆ ಸೇರಿಸಬಹುದು" ಎಂದನು.

ಒಬ್ಬ ಕವಿಯನ್ನು ಹೀಗೆ ಅಪಮಾನಪಡಿಸುವ ಸಂದರ್ಭ ಬಂದುದಕ್ಕಾಗಿ ಮಂತ್ರಿ ತನ್ನೊಳಗೆ ಬಹಳ ಸಂತೋಷಪಡುತ್ತಿದ್ದನು.

ಆದರೆ ಚಾಂದ್ರಾಯಣನು ಸ್ವಲ್ಪವೂ ಜಂಕದೆ, "ಮಾನವರು ಶ್ರಮ ಪಡುವುದೆಂದರೆ ದೇವತಾರ್ಚನೆಗೆ ಸಮಾನವಾದುದು. ಶರೀರದಿಂದ ಶ್ರಮಪಡುವುದಾದರೂ, ಬುದ್ಧಿ ಮನಸ್ಸುಗಳಿಂದ ಶ್ರಮಪಡುವುದಾದರೂ. ಕ್ಷುಧೆಯ ನಿವೃತ್ತಿಗೆ ನೀತಿಬದ್ಧವಾದ ಶ್ರಮವು ಯಾವುದೇ ಆದರೂ ಉಚ್ಚನೀಚವೆಂಬುದು ಇಲ್ಲವೇ ಇಲ್ಲ. ಈಗಿನ ಪರಿಸ್ಥಿತಿಯಲ್ಲಿ ನನಗೆ ಬೇಕಾದುದು ಮಹಾರಾಜರ ಸೇವೆಯಾಗಿ ಬರುವ ಉದ್ಯೋಗವೇ " ಎಂದನು.

ಚಂದ್ರಾಯಣನು ಹೇಳಿದ ಮಾತಿನಿಂದ ಮಂಜುನಾಥ ಮಂತ್ರಿ ತುಂಬ ಬೆರಗಾದನು. ಕೂಡಲೇ ಏನೋ ಆಲೋಚನೆ ತಟ್ಟಿದಂತೆ, "ಪ್ರಭೂ ! ಈ ಚಂದ್ರಾಯಣನು ಬಹಳ ಜಾಣನೇ ಸರಿ. ಒಳ್ಳೆಯ ಕುಲೀನನಾಗಿ ಹುಟ್ಟಿ, ವಿದ್ಯೆ, ಸಂಸ್ಕಾರಗಳಿರುವ ಇವನು, ಅಶ್ವಶಾಲೆಯಲ್ಲಿ ಕುದುರೆಯ ಚಾಕರಿ ಮಾಡಲು ಸಿದ್ಧನಾಗಿರುವುದರಲ್ಲಿ ಒಂದು ದುರುದ್ದೇಶ ಕಾಣುತ್ತದೆ. ಅದು ನನಗೆ ಚೆನ್ನಾಗಿ ಅರ್ಥವಾಗಿದೆ. ಪ್ರಭುಗಳ ಅಪ್ಪಣೆಯಾದರೆ ಹೇಳುತ್ತೇನೆ" ಎಂದನು.

ಆ ಮಾತು ಕೇಳಿ ಚಾಂದ್ರಾಯಣನಿಗೆ ಆಶ್ಚರ್ಯವಾಯಿತು. ವಿಶಾಖದತ್ತನೂ ಆಶ್ಚರ್ಯಪಟ್ಟು ಪ್ರಶ್ನಾರ್ಥಕವಾಗಿ ಮಂತ್ರಿಯನ್ನು ನೋಡಿದನು. ರಾಜನ ಅಭಿಪ್ರಾಯ ತಿಳಿದು ಮಂತ್ರಿ ರಾಜನೊಂದಿಗೆ, "ತಮ್ಮ ರಾಜ್ಯದಲ್ಲಿ ಕವಿಗಳಿಗೆ ಆದರಣೆಯಿಲ್ಲದೆ. ಅವರು ಅಶ್ವಶಾಲೆಯನ್ನು ತೊಳೆಯುತ್ತ ಬದುಕು ಸಾಗಿಸುವರೆಂದು ಇವನು ನಿರೂಪಿಸಬೇಕೆಂದಿದ್ದಾನೆ. ಹಾಗೆ ಬೇರೆ ದೇಶಗಳಲ್ಲಿ ಇಲ್ಲಿಯ ರಾಜನಿಗೆ ಅಪಕೀರ್ತಿ ಬರುವಂತೆ ಮಾಡಲಿಕ್ಕಾ



ಗಿಯೇ ನಾವು ಕೊಡುವ ಕೆಲಸಕ್ಕೆ ಸಂತೋಷ ನಟಿಸುತ್ತ ಒಪ್ಪಿಕೊಳ್ಳುತ್ತಿದ್ದಾನೆ" ಎಂದನು.

ಚಾಂದ್ರಾಯಣನು ತನಗೆ ಬರುವ ಕೋಪವನ್ನು ನಿಗ್ರಹಿಸಿಕೊಂಡು ರಾಜನನ್ನು ನೋಡಿ, "ಪ್ರಭೂ, ಕವಿಯಾಗಿ ತಮ್ಮ ಆಸ್ಥಾನದಲ್ಲಿ ಸೇರಬಹುದೆಂದು ಬಂದ ನನಗೆ, ಅಶ್ವಶಾಲೆಯಲ್ಲಿ ಉದ್ಯೋಗ ಕೊಡಬಹುದೆಂದು ಈ ಸಭೆಯಲ್ಲಿ ಹೇಳಿದವರು ಮಂತ್ರಿಗಳೇ. ಈ ಬಗೆಯ ಭಾವನೆ ಅವರಿಗಿದ್ದರೆ ನಾನೇನು ಮಾಡಲಿ? ಅದರಲ್ಲಿರುವ ಭಾವವು ನನಗೆ ಅರ್ಥವಾಗಲಿಲ್ಲ. ಅರ್ಥ ಹೇಳಿದವರೂ ಅವರೇ. ಅವರು ಕೊಡಬಹುದೆಂಬ ಕೆಲಸವನ್ನು ನಾನು ಒಳ್ಳೆಯ ಉದ್ದೇಶದಿಂದಲೇ ಅಂಗೀಕರಿಸಿದ್ದೇನೆ" ಎಂದನು.

"ಅದೇನು ನಿನ್ನ ಒಳ್ಳೆಯ ಉದ್ದೇಶ?" ಎಂದು ಕೇಳಿದನು ಮಂಜುನಾಥ ಮಂತ್ರಿ.

"ವಿಶಾಖದತ್ತ ಮಹಾರಾಜರ ರಾಜ್ಯದಲ್ಲಿ ಅಶ್ವಶಾಲೆಯ ಕೆಲಸದವನೂ ಒಳ್ಳೆಯ ಕವಿತೆ ಹೇಳಬಲ್ಲನೆಂದು ಹತ್ತು ಮಂದಿ ಹೇಳಿಕೊಂಡರೆ ಮಹಾರಾಜರ ಕೀರ್ತಿ ಇಮ್ಮಡಿಯಾಗುತ್ತದೆಂದು ನನ್ನ ಉದ್ದೇಶ" ಎಂದನು ಚಾಂದ್ರಾಯಣ.

ಮಂತ್ರಿಗೆ ಏನು ಹೇಳಬೇಕೆಂದು ತೋರದೆ ನಿಶ್ಚೇಷ್ಟಿತನಾಗಿ ನೋಡುತ್ತಾ ಕುಳಿತನು. ಆಗ ಚಾಂದ್ರಾಯಣನು "ಮಹಾ ಮಂತ್ರಿಯವರಿಗೆ ಕವಿಗಳ ಮೇಲೆ ಸಣ್ಣ ದೃಷ್ಟಿಯಿರಲು ಕಾರಣವೇನೋ ನಾನರಿಯೆನು. ಯಾವ ದೇಶದ ದೊಡ್ಡತನಕ್ಕಾದರೂ ಆ ದೇಶದ ವರ್ತಕ ವ್ಯಾಪಾರಗಳಲ್ಲಿ, ಬೇರೆ ಬೇರೆ ವೃತ್ತಿ ಉದ್ಯಮಗಳಲ್ಲಿ ಸಾಧಿಸಿಕೊಳ್ಳುವ ವಿಜಯದೊಂದಿಗೆ ಕವಿಗಳ ಪ್ರತಿಭೆ ಕೂಡಾ ಕಾರಣವಾಗುತ್ತದೆ. ಶರೀರ ಸಂರಕ್ಷಣೆಗೆ ಅನ್ನ ಬಟ್ಟೆಗಳು ಎಷ್ಟು ಅಗತ್ಯವೋ ಮನೋಲ್ಲಾಸಕ್ಕೆ, ಆನಂದಕ್ಕೆ ಜ್ಞಾನಾಭಿವೃದ್ಧಿಗೆ ಕವಿತ್ವವೂ ಅಗತ್ಯವಾಗುತ್ತದೆ. ಆದುದರಿಂದಲೇ ಪ್ರಪಂಚದಲ್ಲಿ ಕವಿತ್ವವು ಅಮರವಾಗಿ ಉಳಿದಿದೆ" ಎಂದನು.

ಆ ಮಾತುಗಳನ್ನು ಕೇಳಿದ ಮಂತ್ರಿ ಮುಗುಳು ನಗುವಿನಿಂದ "ಚಾಂದ್ರಾಯಣಾ, ನೀನು ಚಿಕ್ಕವನಾದರೂ ನನ್ನ ಕಣ್ಣಿನ ಪರೆಯನ್ನು ಹರಿದೆಯಪ್ಪ. ನೀನು ನಿನ್ನ ತಾತನವರಂಥ ಪ್ರತಿಭಾಶಾಲಿಯಾಗಲು ತಕ್ಕವನೇ ನಿಜ. ಈ ದಿನದಿಂದ ನಾನು ಕವಿ ಸನ್ಮಾನಗಳಿಗೆ ವ್ಯತಿರೇಕ ಭಾವದವನಲ್ಲ" ಎಂದನು.

ಮಂಜುನಾಥ ಮಂತ್ರಿಯಲ್ಲಿ ಬಂದ ಬದಲಾವಣೆಯನ್ನು ನೋಡಿ ವಿಶಾಖದತ್ತ ರಾಜನಿಗೆ ಬಹಳ ಸಂತೋಷವಾಯಿತು. ಸಭಿಕರಿಗೂ ಸಂತೋಷವಾಯಿತು. ಆಗಲೇ ರಾಜನು ಚಾಂದ್ರಾಯಣನನ್ನು ಘನ ರೀತಿಯಲ್ಲಿ ಸತ್ಕರಿಸಿ ಆಸ್ಥಾನ ಕವಿಯಾಗಿ ನಿಯಮಿಸಿದನು.






ತಪೋಧನರಾದ ಮಹಾಮುನಿಗಳನ್ನು ಕೂಡಿಕೊಂಡು ಬಂದ ಅಗಸ್ತ್ಯನು ರಾಮನಿಗೆ ಲಂಕಾಪುರದ ಹುಟ್ಟುಪೂರ್ವೋತ್ತರಗಳನ್ನು ಹೇಳುತ್ತಾ, ಸುಕೇತುವಿನ ಕುಮಾರರಾದ ಮಾಲ್ಯವಂತ, ಮಾಲಿ, ಸುಮಾಲಿಯರು ಲಂಕಾಪಟ್ಟಣದಲ್ಲಿರುತ್ತ, ವರಬಲದಿಂದ ಮೂರು ಲೋಕಗಳನ್ನೂ ಪೀಡಿಸಿಕೊಂಡಿರುತ್ತ, ತಮ್ಮ ತಮ್ಮ ಹೆಂಡತಿ ಮಕ್ಕಳೊಂದಿಗೆ ವೃದ್ಧಿ ಹೊಂದಿ ಇನ್ನಿಷ್ಟು ಭಯಂಕರರಾದರೆಂದು ವಿವರಿಸಿ, ಹೇಳುವುದನ್ನು ಮುಂದುವರಿಸಿದನು :

ರಾಕ್ಷಸರಿಂದಾಗುವ ಯಾತನೆಗಳನ್ನು ತಾಳಲಾಗದೆ ದೇವತೆಗಳೂ, ಋಷಿಗಳೂ ರಹಸ್ಯದಲ್ಲಿ ಕೂಡಿ, ಆಲೋಚನೆ ಮಾಡಿದರು. ಆಮೇಲೆ ಎಲ್ಲರೂ ಒಂದಾಗಿ ಮಹೇಶ್ವರನ ಬಳಿಗೆ ಹೋಗಿ "ಶಂಭೋ! ಜಗದ್ರಕ್ಷಕಾ! ಸುಕೇತನ ಕುಮಾರರು ಬ್ರಹ್ಮದೇವನಿಂದ ವರಗಳನ್ನು ಪಡೆದು ಗರ್ವಾತಿರೇಕದಿಂದ ವಿಪರೀತವಾಗಿ ಪ್ರವರ್ತಿಸುತ್ತಿದ್ದಾರೆ. ದೇವತೆಗಳನ್ನು ಸ್ವರ್ಗದಿಂದ ಓಡಿಸಿ ಅದನ್ನು ತಾವು ಆಕ್ರಮಿಸಿಕೊಂಡಿದ್ದಾರೆ. ಮುನಿಗಳ ಆಶ್ರಮಗಳನ್ನೂ, ಮನೆಗಳನ್ನೂ ನೆಲಮಟ್ಟ ಮಾಡುತ್ತಿದ್ದಾರೆ. ಸಾಧು ಸಂತರಿಗೆ ತಾವೇ ಇಲ್ಲದಂತಾಗಿದೆ. ಬ್ರಹ್ಮ, ರುದ್ರ, ವಿಷ್ಣು, ಇಂದ್ರ, ಯಮ, ವರುಣ, ಚಂದ್ರ ಸೂರ್ಯ ಎಲ್ಲವೂ ಅವರೇ ಎಂದು ಹೇಳಿಕೊಳ್ಳುತ್ತಿದ್ದಾರೆ. ಪ್ರತಿಕ್ಷಣದಲ್ಲಿಯೂ ಯುದ್ಧ ಸನ್ನದ್ಧರಾಗಿರುವ ಆ ಮೂವರು ರಾಕ್ಷಸ ಪರಿವಾರಗಳ ಹಾವಳಿಯಿಂದ ನಮ್ಮನ್ನು ಕಾಪಾಡಬೇಕು. ನಿನ್ನನ್ನೇ ನಂಬಿದ್ದೇವೆ, ಮಹಾದೇವಾ" ಎಂದು ಭಯಪಡುತ್ತಾ ಬೇಡಿಕೊಂಡರು.

ಆದರೆ ಮಹೇಶನು ಸುಕೇತನ ಪಕ್ಷಪಾತಿಯಾಗಿದ್ದನು. ಆದುದರಿಂದ ಅವನು ದೇವತೆಗಳನ್ನು ನೋಡಿ, "ಓ ದೇವತೆಗಳೇ! ಮಹರ್ಷಿಗಳೇ! ಆ ರಾಕ್ಷಸರ ಪ್ರತಾಪಗಳು ನನಗೆ ಗೊತ್ತಿಲ್ಲದ್ದೇನಲ್ಲ. ಆದರೇನು ಮಾಡಲಿ? ನಾನು ಅವರನ್ನು ಕೊಲ್ಲಲು ಸಾಧ್ಯವಿಲ್ಲ: ಅವರ ಸಾವು ನನ್ನ ಕೈಯಲ್ಲಿ ಎಂದು

೨. ರಾವಣನ ಜನನ



ವಿಧಿ ಬರೆದಿಲ್ಲ. ನಾನು ಹೇಳುವುದನ್ನು ಕೇಳಿರಿ. ನೀವೆಲ್ಲಾ ವಿಷ್ಣುವಿನ ಹತ್ತಿರ ಹೋಗಿರಿ. ಅವನು ತಪ್ಪದೆ ಅವರನ್ನು ಸಂಹರಿಸದೆ ಬಿಡಲಾರನು. ಧರ್ಮಸಂಕಟದಂತಹ ಈ ಪರಿಸ್ಥಿತಿಯಲ್ಲಿ ನಿಮಗೆ ವಿಷ್ಣುವೇ ಗತಿ ಎಂದಷ್ಟೇ ಹೇಳಲು ನನಗೆ ಸಾಧ್ಯ. ಬೇರೆ ದಾರಿ ತೋರುವುದಿಲ್ಲ. ಅಲ್ಲಿಗೇ ಹೋಗಿರಿ" ಎಂದನು.

ದೇವತೆಗಳೂ, ಋಷಿಗಳೂ ಮಹೇಶ್ವರನಿಗೆ ಜಯಜಯವೆನ್ನುತ್ತಾ, ನಮಸ್ಕಾರಮಾಡಿ, ವೈಕುಂಠದಲ್ಲಿರುವ ವಿಷ್ಣುಮೂರ್ತಿಯ ಬಳಿಗೆ ಹೋದರು. ಮಹಾವಿಷ್ಣುವಿನ ಮುಂದೆ ಮಹೇಶ್ವರನ ಹತ್ತಿರ ಮೊರೆಯಿಟ್ಟುಕೊಂಡಂತೆಯೇ ಬೇಡಿಕೊಂಡರು. ಮುಖ್ಯವಾಗಿ ತ್ರಿಕೂಟ ಪರ್ವತದ ಮೇಲಿನ ಲಂಕಾ ಪಟ್ಟಣದಲ್ಲಿರುವ ರಾಕ್ಷಸರನ್ನು ಕೊಂದು ತಮ್ಮನ್ನು ಕಾಪಾಡಬೇಕೆಂದು ಪ್ರಾರ್ಥಿಸಿಕೊಂಡರು. "ನಿನ್ನ ಹೊರತು ಬೇರೆ ದಿಕ್ಕಿಲ್ಲ. ಮಹೇಶ್ವರನೂ ನಿನಗೇ ಶರಣಾಗುವಂತೆ ಹೇಳಿದ್ದಾನೆ" ಎಂದು ಸಾಷ್ಟಾಂಗ ನಮಸ್ಕಾರ ಮಾಡಿದರು.

ವಿಷ್ಣುಮೂರ್ತಿ ಅವರಿಗೆ ಅಭಯವಿತ್ತು, "ನನಗೆ ಸುಕೇತುವೂ ಅವನ ಮೂವರು ಮಗಂದಿರೂ ಗೊತ್ತು. ಅವರ ಪ್ರವರ್ತನೆಗಳನ್ನೂ ನೋಡುತ್ತಲಿದ್ದೇನೆ. ನನಗೂ ಅವರ ಮೇಲೆ ಕೋಪದ ಉರಿ ಏಳುತ್ತಿದೆ. ನೀವೆಲ್ಲಾ ಬಂದು ಹೇಳಿಕೊಂಡ ಮೇಲೆ ಇನ್ನು ಯೋಚನೆ ಮಾಡಲಾರೆ. ಶಿವನೂ ನನ್ನಿಷ್ಟದಂತೆ ಮಾಡಲು ಒಪ್ಪಿದ್ದಾನೆಂದಾಯಿತು. ಅವರನ್ನು ತಪ್ಪದೆ ಸಂಹರಿಸಿಬಿಡುತ್ತೇನೆ. ಇನ್ನು ಮೇಲೆ ನೀವು ಹೆದರಬೇಕಾಗಿಲ್ಲ" ಎಂದನು.

ಆ ಮಾತುಗಳನ್ನು ಕೇಳಿ ದೇವತಾದಿಗಳೆಲ್ಲಾ ಆತ್ಮಾನಂದಗೊಂಡು ವಿಷ್ಣುವನ್ನು ಸ್ತೋತ್ರ ಮಾಡುತ್ತ, ತಮ್ಮ ತಮ್ಮ ಪ್ರದೇಶಗಳಿಗೆ ಹೊರಟು ಹೋದರು.

ಈ ಸಂಗತಿ ಬೇಗದಲ್ಲೇ ಗೂಢಚಾರರ ಮೂಲಕವಾಗಿ ಲಂಕೆಗೆ ಹೋಗಿ ಮುಟ್ಟಿತು. ಅದನ್ನು ತಿಳಿದು ಮಾಲ್ಯವಂತನು ತನ್ನ ತಮ್ಮಂದಿರೊಂದಿಗೆ, "ದೇವತೆಗಳೂ ಋಷಿಗಳೂ ಸೇರಿ ನಮ್ಮನ್ನು ಕೊಲ್ಲಿಸಲು ಪರದಾಡುತ್ತಿದ್ದಾರೇನು ? ಮೊದಲು ಮಹೇಶ್ವರನ ಹತ್ತಿರ ಹೋಗಿ, ಅವನ ಕಾಲಿಗೆ ಬಿದ್ದು ಅಂಗಲಾಚಿಕೊಂಡರಂತೆ. ಮಹೇಶ್ವರನು ತನ್ನಿಂದಾಗದೆಂದು ಹೇಳಿ ವಿಷ್ಣುಮೂರ್ತಿಯ ಬಳಿಗೆ ಕಳುಹಿಸದನಂತೆ, ಮಹೇಶ್ವರನ ಸಲಹೆಯ ಮೇರೆಗೆ ಅವರೆಲ್ಲ ಬಲಗೆಟ್ಟು ಬಣ್ಣಗೆಟ್ಟು ವಿಷ್ಣುವಿನ ಪಾದಗಳಿಗೆ ತಲೆತಾಗಿಸಿ ಬೇಡಿಕೊಂಡರಂತೆ ! ಅವನು ನಮ್ಮೆಲ್ಲರನ್ನೂ ಕೊಲ್ಲುವುದಾಗಿ ಅವರಿಗೆ ಅಭಯಕೊಟ್ಟು, ಕಳುಹಿಸಿದ್ದಾನಂತೆ. ವಿಷ್ಣುವಿಗೆ ಬೇರೆ ಕೆಲಸವಿಲ್ಲ. ಹಿರಣ್ಯಕಶಿಪುವಿನಂತಹ ಅನೇಕ ರಾಕ್ಷಸರನ್ನು ಕೊಂದಿದ್ದಾನೆ. ಆದುದರಿಂದ ನಾವು ಸುಮ್ಮನಿರಬಾರದು. ಏನು ಮಾಡಬೇಕೆಂದು ಆಲೋಚಿಸಬೇಕು. ಏಕೆಂದರೆ

విష్ణు బహుదొడ్డ మాయావి. హిరణ్యకశిపువన్ను నరసింహనాగి కొందవను. ఎష్టో వరగళన్ను పడెదు దివ్యాస్త్రగళింద యుద్ధమాడువ, మాయా విద్యెగళల్లి పారంగతరాద రాక్షసరన్ను కొందిద్దానె విష్ణు. విష్ణువిన హత్తిర యుద్ధ మాడి గెద్ద రాక్షసనొబ్బనూ ఇల్ల. ఇదన్నెల్ల నెనపిట్టుకొండు ఆలోచిసబేకాగిదె" ఎందను.



మాలియూ, సుమాలియూ హీగెందు ఉత్తర కొట్టరు :

"నావేనూ తిళియదవరల్ల, పండితరాగిద్దేవె. యజ్ఞగళన్నూ దానధర్మగళన్నూ మాడుత్తిద్దేవె. నమగె అంత్యవిల్లదష్టు ఐశ్వర్యవిదె. అత్యంత బలిష్ఠరాద శత్రుగళన్నెల్ల లీలాజాలవాగి జయిసిద్దేవె. విష్ణుమూర్తియాగలీ, రుద్రనే ఆగలీ, ఇంద్రనే ఆగలీ నమ్మన్నేను మాడలూ సాధ్యవిల్ల. ఎల్లా లోకగళూ నమగె హెదరికొండివె. విష్ణు నమ్మన్ను ద్వేషిసలిక్కె యావ కారణవూ ఇల్ల. ఈ దేవతెగళే ఇల్లద చాడి హేళి ఆతనన్ను ఉద్రేకిసిరబేకు. అద్దరింద నావు నమ్మ సైన్యగళొదిగె హోగి ఆ దేవతెగళ సమాచార తెగెదుకొళ్ళబేకు. అవరు తలె యెత్తి తిరుగద హాగె మాడిబిడబేకు. అవర దూరు ఇల్లదిద్దరె విష్ణు క్షీర సాగరదల్లి సుమ్మనె మలగికొండే ఇరుత్తానె. అవన బళిగె యారూ హోగదంతె మాడిదరాయితు."

హీగె ఆలోచనె మాడికొండు ఆ రాక్షస సహోదరరు దొడ్డ యుద్ధక్కె బేకాద ప్రయత్నగళన్ను మాడి, దొడ్డ రాక్షస సైన్య దొందిగె స్వర్గలోకక్కె హొరటరు. లంకెయింద రథగళూ, ఆనె, కుదురెగళూ, ఒంటెగళూ మొదలాద వాహనగళల్లి తమ్మ సామాను గళన్ను హేరికొండు హొరటరు. మాలియే అపారవాద ఆ రాక్షస సేనెగె నాయకనాగిద్దను. లంకెయల్లిద్ద సమస్త రాక్షసరూ హాగె ఒమ్మెగే హొరటు హోదుదరింద లంకె పాళు బిద్ద పట్టణదంతె కాణుత్తిత్తు. లోకదవరెల్ల ఆ విచిత్రవన్ను ఆశ్చర్యదింద నోడిదరు.

రాక్షసరు బహు దొడ్డ యుద్ధక్కె హొరట సంగతి తిళిద కూడలే విష్ణుమూర్తి ధగధగనె హొళెయువ కవచవన్ను ధరిసికొండు బిల్లు, బాణ, శంఖ, చక్ర, గదె, ఖడ్గగళన్ను ఎత్తికొండు, పీతాంబరధారియాగి గరుడవాహనదల్లి బందు దేవతెగళ సేనెగళొందిగె సేరిదను. హీగాగువుదెందు రాక్షసరు ఇదిరు నోడిరలిల్ల. హింజరియలూ సాధ్యవిల్లద



ಪರಿಸ್ಥಿತಿ. ಉಭಯ ಪಕ್ಷಗಳಿಗೂ ಯುದ್ಧವು ಪ್ರಾರಂಭವಾಯಿತು. ಘನ ಘೋರ ಯುದ್ಧವದು.

ವಿಷ್ಣುಮೂರ್ತಿ ತನ್ನ ಬಾಣಗಳಿಂದ, ಚಕ್ರಾಯುಧದಿಂದ, ಗದಾಘಾತದಿಂದ ಅನೇಕ ಮಂದಿ ರಾಕ್ಷಸರನ್ನು ಕೊಂದನು. ಆಗ ಮಾಲಿ ವಿಷ್ಣುಮೂರ್ತಿಯನ್ನಿದಿರಿಸಿ ಅತಿದಾರುಣವಾದ ಯುದ್ಧ ಮಾಡುತ್ತ, ವಿಷ್ಣುವಿನ ವಾಹನವಾದ ಗರುತ್ಮಂತನ ತಲೆಯ ಮೇಲೆ ಬಲವಾಗಿ ಹೊಡೆಯಲು ಗರುತ್ಮಂತನು ಯುದ್ಧರಂಗದಿಂದ ಓಡಿ ಹೋದನು. ಆದರೆ ಮತ್ತೆ ಸುಧಾರಿಸಿಕೊಂಡು ವಿಷ್ಣುವಿನೊಂದಿಗೆ ಮತ್ತೆ ಯುದ್ಧರಂಗಕ್ಕೆ ಬಂದನು. ಈ ಸಾರಿ ವಿಷ್ಣುವಿನ ಚಕ್ರಾಯುಧವು ಮಾಲಿಯ ತಲೆಯನ್ನು ಕತ್ತರಿಸಿ ಹಾಕಿತು.

ಮಾಲಿ ಸತ್ತು ಬಿದ್ದುದನ್ನು ನೋಡಿ ಮಾಲ್ಯವಂತ, ಸುಮಾಲಿಯರು ತೀರಾ ನಿರಾಶರಾಗಿ ಉಳಿದ ರಾಕ್ಷಸ ಬಳಗದೊಂದಿಗೆ ಲಂಕೆಯ ಕಡೆಗೆ ಓಡತೊಡಗಿದರು. ವಿಷ್ಣು ಅವರನ್ನು ವಧಿಸುತ್ತ ಬೆನ್ನಟ್ಟಿಕೊಂಡೇ ಹೋದನು.

ಅದನ್ನು ನೋಡಿ ಮಾಲ್ಯವಂತನು, "ಹೇ, ವಿಷ್ಣೂ! ನೀನು ಕ್ಷತ್ರಿಯ ಧರ್ಮವನ್ನು ಕೂಡಾ ಪಾಲಿಸದೆ ಓಡಿ ಹೋಗುತ್ತಿರುವ ನಮ್ಮನ್ನು ಅಟ್ಟಿಸಿ ಕೊಲ್ಲುವುದರಲ್ಲಿ ಯಾವ ನ್ಯಾಯವಿದೆ? ಅಂಥವನಿಗೆ ವೀರಸ್ವರ್ಗವೂ ಬಾರದು. ನಿನಗೆ ಹಾಗೆ ಯುದ್ಧ ಮಾಡಬೇಕೆಂದಿದ್ದರೆ ನನ್ನೊಂದಿಗೆ ಯುದ್ಧ ಮಾಡು. ಸಿಕ್ಕವರನ್ನೆಲ್ಲ ಕೊಲ್ಲಬೇಡ. ಧೈರ್ಯವಿದ್ದರೆ ಬಾ ನನ್ನ ಮುಂದೆ!" ಎನ್ನುತ್ತಾ ವಿಷ್ಣುವಿನ ಮುಂದೆ ಬಂದು ನಿಂತನು.

"ಕೊಟ್ಟಮಾತು ಪಾಲಿಸುವುದೇ ಯುದ್ಧ ಧರ್ಮ. ನಿಮ್ಮ ಅಧಿಪತಿಗಳಿಂದಾಗಿ ದೇವತೆಗಳಿಗೆ ನಿಮ್ಮನ್ನು ಕೊಂದು ತೀರುತ್ತೇನೆಂದು ಮಾತುಕೊಟ್ಟಿದ್ದೇನೆ. ಹೀಗೆ ಓಡಿದರೆ ಬಿಡುವೆನೇ? ಪಾತಾಳಕ್ಕೆ ಹೋದರೂ ನಿಮ್ಮನ್ನು ಹುಡುಕಿ ಹುಡುಕಿ ಕೊಲ್ಲುತ್ತೇನೆ ನೀನೊಬ್ಬನನ್ನು ಕೊಂದಮಾತ್ರಕ್ಕೆ ಕಥೆ ಮುಗಿಯುವುದಿಲ್ಲ" ಎಂದನು ವಿಷ್ಣುಮೂರ್ತಿ.

ಇಬ್ಬರೂ ದ್ವಂದ್ವಯುದ್ಧಕ್ಕೆ ತೊಡಗಿದರು. ಮಾಲ್ಯವಂತನು ಗರುತ್ಮಂತನನ್ನೂ, ವಿಷ್ಣುವನ್ನೂ ಬಹಳವಾಗಿ ಪೀಡಿಸಿದನು. ಗರುತ್ಮಂತನು ತನ್ನ ರೆಕ್ಕೆಗಳಿಂದ ಹೋರುಗಾಳಿಯನ್ನು ಎಬ್ಬಿಸಿದಾಗ, ಆ ಗಾಳಿ ಮಾಲ್ಯವಂತನನ್ನು ಆಕಾಶಕ್ಕೆ ಹಾರಿಸಿತು. ಅದನ್ನು ನೋಡಿ ಸುಮಾಲಿ ತನ್ನ ಸೈನ್ಯವನ್ನು ಬಹು ವೇಗವಾಗಿ ಓಡಿಸಿಕೊಂಡು ಲಂಕೆಯ ಕಡೆಗೆ ಓಡಿದನು: ಮಾಲ್ಯವಂತನು ಹೇಗೋ ತನ್ನ ಸೇನೆಯನ್ನು ಕಳೆತುಕೊಂಡು ದೊಡ್ಡ ಪರಾಭವದ ಹೊರೆ ಹೊತ್ತ ಮುಖದಲ್ಲಿ ಲಂಕೆಗೆ ತಲುಪಿದನು. ಅಲ್ಲಿಯೂ ಅವನಿಗೆ ಕ್ಷೇಮವಿಲ್ಲವೆನಿಸಿತು.

ವಿಷ್ಣುಮೂರ್ತಿ ಸುಮ್ಮನಾಗಲಿಲ್ಲ. ಲಂಕಾವಾಸಿಗಳಾದ ರಾಕ್ಷಸರೊಂದಿಗೆ ಅನೇಕ ಯುದ್ಧಗಳನ್ನು



ಮಾಡುತ್ತ, ಅನೇಕ ಮಂದಿ ರಾಕ್ಷಸ ವೀರರನ್ನು ಕೊಲ್ಲುತ್ತಲೇ ಇದ್ದನು. ಸತ್ತು ಉಳಿದ ರಾಕ್ಷಸರು ಇನ್ನು ಉಳಿಗಾಲವಿಲ್ಲವೆಂದುಕೊಂಡು ತಮ್ಮ ತಮ್ಮ ಹೆಂಡಿರು ಮಕ್ಕಳೊಂದಿಗೆ, ಪರಿವಾರದೊಂದಿಗೆ ಲಂಕೆಯನ್ನು ಪೂರ್ತಿಯಾಗಿ ಬಿಟ್ಟು ಪಾತಾಳಕ್ಕೆ ಹೋಗಿ ಸೇರಿಕೊಂಡರು.

ರಾಕ್ಷಸರೆಲ್ಲ ಅಲ್ಲಿಯೇ ವಾಸಿಸುತ್ತ, ಸುಮಾಲಿಯನ್ನು ತಮಗೆ ಅಧಿಪತಿಯಾಗಿ ಮಾಡಿಕೊಂಡರು. ಆ ಕಾಲದಲ್ಲಿ ವಿಷ್ಣುಮೂರ್ತಿಯ ಕೈಯಲ್ಲಿ ಸತ್ತ ಮಾಲ್ಯವಂತನೇ ಮೊದಲಾದ ರಾಕ್ಷಸರು ರಾವಣ ಕುಂಭಕರ್ಣರಿಗಿಂತಲೂ ಹೆಚ್ಚಿನ ಬಲವಂತರಾಗಿದ್ದರು. ಅಂಥವರ ಗತಿಯೇ ಅಧೋಗತಿಯಾಯಿತು.

ರಾಕ್ಷಸರೆಲ್ಲ ಲಂಕೆಯನ್ನು ಬಿಟ್ಟು ಹೊರಟು ಹೋದ ಮೇಲೆ ವೈಶ್ರವಣನು ಮತ್ತೆ ಲಂಕೆಗೆ ಬಂದು ಅಲ್ಲಿಯೇ ವಾಸಮಾಡಲು ತೊಡಗಿದನು. ಧನಾಧೀಶನಾದ ಅವನಿಗೆ ಕುಬೇರನೆಂಬ ಹೆಸರು ಬಂದಿತ್ತು.

ಹಾಗೆ ಕಾಲವು ಸಾಗುತ್ತಿರಲು, ಒಂದು ದಿನ ಸುಮಾಲಿ, ತನ್ನ ಮಗಳು ಕೈಕಸಿಯನ್ನು ಕರೆದುಕೊಂಡು ಪಾತಾಳ ಲೋಕದಿಂದ ಹೊರಟು ಭೂಲೋಕದಲ್ಲಿ ವಿಹರಿಸತೊಡಗಿದನು. ಅವರು ಭೂಮಿಯ ವಿಶೇಷಗಳನ್ನು ನೋಡುತ್ತ ಸಂಚರಿಸಿಕೊಂಡಿರುವಾಗ, ಪುಷ್ಪಕದಲ್ಲಿ ಏರಿಕೊಂಡು ತನ್ನ ತಂದೆಯ ದರ್ಶನಕ್ಕೆ ಹೋಗುವ ಕುಬೇರನು ಅವರ ಕಣ್ಣಿಗೆ ಬಿದ್ದನು.

ಆಗ ಸುಮಾಲಿಯ ಮನಸ್ಸು ವ್ಯಗ್ರವಾಯಿತು. ಕುಬೇರನ ಐಶ್ವರ್ಯ ವೈಭವಗಳೊಂದಿಗೆ ತನ್ನ ದೌರ್ಭಾಗ್ಯ ಸ್ಥಿತಿಯನ್ನು ಹೋಲಿಸುತ್ತ, "ಏನು ಮಾಡಿದರೆ ನಾವು ಅಭಿವೃದ್ಧಿಗೆ ಬಂದೇವು ?" ಎಂದು ಆಲೋಚಿಸುತ್ತಾ ಕಡೆಗೆ ಒಂದು ಆಲೋಚನೆಯನ್ನು ಗಟ್ಟಿ ಮಾಡಿಕೊಂಡನು. ರೂಪದಲ್ಲಿ ಅಪರ ಲಕ್ಷ್ಮೀದೇವಿಯಂತಿರುವ ತನ್ನ ಕುಮಾರಿಯನ್ನು ನೋಡಿ ಅವನು, "ಅಮ್ಮಾ, ನಿನಗೆ ಮದುವೆಯ ವಯಸ್ಸು ಬಂದಾಗಿದೆ. ನಿನ್ನನ್ನು ಮದುವೆಯಾಗಲು ಬಯಸುವವರು ಅನೇಕರಿದ್ದಾರೆ. ಆದರೆ ನೀನು ಒಪ್ಪಿಕೊಳ್ಳುವಿಯೋ ಇಲ್ಲವೋ ಎಂದು ಸಂದೇಹ ಪಡುತ್ತೇನೆ. ವಿಶ್ರವಸುವಿನ ಮಗನಾದ ಕುಬೇರನನ್ನು ನೀನು ಕಣ್ಣಾರೆ ನೋಡಿದೆಯಷ್ಟೆ ? ಅವನ ಧನವೈಭವವನ್ನು ನೋಡಿದ್ದಿತಾನೆ ? ವಿಶ್ರವಸುವಿನ ತಂದೆ ಪುಲಸ್ತ್ಯ ಬ್ರಹ್ಮ. ನೀನು ಮಹಾ ಮುನಿಯಾದ ವಿಶ್ರವಸುವಿನ ಸೇವೆ ಮಾಡಿದರೆ ನಿನಗೆ ಕೂಡಾ ಇಂತಹ ಮಗಂದಿರೇ ಹುಟ್ಟುತ್ತಾರೆ. ನಾನು ಹೇಳಿದ ಹಾಗೆ ಮಾಡುವಿಯಾ ಮಗಳೆ ?" ಎಂದನು.

ತಂದೆಯ ಮೇಲಿರುವ ಗೌರವದಿಂದ ಕೈಕಸಿ ವಿಶ್ರವಸು ತಪಸ್ಸು ಮಾಡುವಲ್ಲಿಗೆ ಹೋದಳು. ಅವಳು ಅವನ ಇದಿರು ಹೋಗಿ ನಿಂತಾಗ ಅವನು



ಯಿಂದ ನನ್ನ ಬಳಿಗೆ ರಾಕ್ಷಸಗಳಿಗೆಯಲ್ಲಿ ಬಂದಿರುವಿ. ಆದುದರಿಂದ ನೀನು ದಾರುಣರಾದ ಮಹಾ ಕ್ರೂರ ಗುಣಗಳುಳ್ಳ ರಾಕ್ಷಸರನ್ನು ಪ್ರಸವಿಸುವಿ" ಎಂದನು.

"ನಿಮ್ಮಂತಹ ತಪೋಧನರಿಗೆ ಅಂತಹ ಕುಮಾರರು ಹುಟ್ಟುವರೇ? ಅಂಥ ಮಕ್ಕಳು ನನಗೆ ಬೇಡ. ದಯಮಾಡಿ ಒಳ್ಳೆಯ ಮಕ್ಕಳನ್ನೇ ಅನುಗ್ರಹಿಸ ಬೇಕು ಸ್ವಾಮಿ" ಎಂದು ಬೇಡಿದಳು ಕೈಕಸಿ. ಅವಳು ತುಂಬಾ ಪ್ರಾರ್ಥಿಸಿಕೊಂಡ ಮೇಲೆ, "ಸರಿ. ನಿನ್ನ ಚಿಕ್ಕಮಗನು ನಿನ್ನ ವಂಶಕ್ಕೆ ತಕ್ಕವನಾಗಿರುತ್ತಾನೆ" ಎಂದನು ವಿಶ್ರವಸು.

ಸ್ವಲ್ಪಕಾಲ ಕಳೆದ ಮೇಲೆ ಕೈಕಸಿ ಒಬ್ಬ ಮಗನನ್ನು ಹೆತ್ತಳು. ಅವನು ನೋಡಲು ಪರಮ ವಿಕಾರ ದಲ್ಲಿದ್ದನು. ರಾಕ್ಷಸ ರೂಪದ ಭಯಂಕರವಾದ ಆಕೃತಿ. ಹತ್ತು ತಲೆಗಳು. ದೊಡ್ಡದೊಡ್ಡ ಕೋರೆ ಹಲ್ಲುಗಳು. ಕಾಡಿಗೆ ರಂಗಿನ ಶರೀರಛಾಯೆ. ಕೆಂಪಗಿನ ತುಟಿಗಳು. ಇಪ್ಪತ್ತು ಕೈಗಳು. ದೊಡ್ಡ ದೊಡ್ಡ ಬಾಯಿಗಳು. ಇಂತಹ ಮಗನಿಗೆ ಹತ್ತು ತಲೆಗಳಿರುವು ದನ್ನು ನೋಡಿ ವಿಶ್ರವಸು ಅವನಿಗೆ ದಶಗ್ರೀವ (ಹತ್ತು ಕಂಠಗಳಿರುವವ) ಎಂದು ನಾಮಕರಣ ಮಾಡಿದನು. ಅವನೇ ರಾವಣ.

ರಾವಣನ ಅನಂತರ ಹುಟ್ಟಿದ ಕುಂಭಕರ್ಣನು ಮಹಾ ಬಲಶಾಲಿ. ಯಾವ ಪ್ರಾಣಿಗೂ ಇಲ್ಲದಷ್ಟು ದಪ್ಪ, ಘೋರ ಉದ್ದದ ಶರೀರದವನು. ಅವನ ಅನಂತರ ಹುಟ್ಟಿದವಳು ವಿಕಾರಮುಖಿದವಳು ಶೂರ್ಪಣಖಿ.

ಇವರೆಲ್ಲರ ಅನಂತರ ಹುಟ್ಟಿದವನು ವಿಭೀಷಣ. ಅವನು ಸತ್ಯವಂತನೂ, ನ್ಯಾಯಶೀಲನೂ, ಧರ್ಮಪರನೂ ಆದ ಸಾಧು ಗುಣದವನು.

ರಾವಣ ಕುಂಭಕರ್ಣರು ಅರಣ್ಯದಲ್ಲೇ ಓಡಾಡುತ್ತ ಬೆಳೆದು ದೊಡ್ಡವರಾಗುತ್ತಿದ್ದರು. ತಮ್ಮ ಅಸಾಧಾರಣವಾದ ಬಲದರ್ಪಗಳಿಂದ ಅರಣ್ಯ

ಅಗ್ನಿಯನ್ನು ಅರ್ಚಿಸಿಕೊಂಡಿದ್ದನು. ತುಂಬು ಚಂದ್ರ ವದನದಿಂದ ಬೆಳಗುತ್ತಿರುವ ಕೈಕಸಿಯನ್ನು ನೋಡಿ ವಿಶ್ರವಸು, "ಯಾರ ಮಗಳು ನೀನು? ಎಲ್ಲಿಂದ ಬಂದೆ? ಏನು ಕೆಲಸದ ಮೇಲೆ ನನ್ನ ಹತ್ತಿರ ಬಂದಿರುವೆ? ಶಂಕಿಸಬೇಡ. ನಿಜವನ್ನು ಹೇಳಿ ಬಿಡು" ಎಂದನು.

ಕೈಕಸಿ ಕೈಗಳನ್ನು ಮುಗಿದುಕೊಂಡು, "ಮುನೀಶ್ವರ ರಾದ ನೀವು ತಪಸ್ಸಿನ ಶಕ್ತಿಯಿಂದ ಎಲ್ಲವನ್ನೂ ತಿಳಿದುಕೊಳ್ಳುವವರು. ನಾನು ನನ್ನ ತಂದೆಯ ಆಜ್ಞೆಯ ಮೇರೆಗೆ ಬಂದವಳು. ನನ್ನ ಹೆಸರು ಕೈಕಸಿ. ನಿಮ್ಮ ಸೇವೆಯೇ ನನ್ನ ಭಾಗ್ಯವೆಂದು ಕೊಂಡು ಬಂದಿದ್ದೇನೆ" ಎಂದಳು.

"ಹೌದು. ತಿಳಿಯಿತು. ನನ್ನಿಂದ ಪುತ್ರರನ್ನು ಪಡೆಯಬೇಕೆಂದು ಬಂದವಳು ನೀನು" ಎಂದು ವಿಶ್ರವಸು ಅವಳನ್ನು ಯಥಾವಿಧಿಯಾಗಿ ಮದುವೆ ಮಾಡಿಕೊಂಡು, "ಕೈಕಸೀ, ನೀನು ಸಂತಾನಾಪೇಕ್ಷೆ



ಪ್ರದೇಶವನ್ನೆಲ್ಲಾ ದಿಗಿಲುಪಡಿಸುತ್ತಲಿದ್ದರು. ಕುಂಭಕರ್ಣನು ಋಷಿಗಳನ್ನು ಹಿಡಿದು ತಿಂದು ಬಿಡುವನು. ವಿಭೀಷಣನು ಮಾತ್ರ ನಿಯುತಾಹಾರಿಯಾಗಿದ್ದು, ನಿಯಮ ನಿಷ್ಠೆಗಳಿಂದ ಕಾಲಕಳೆಯುತ್ತಿದ್ದನು.

ಅವರೆಲ್ಲಾ ಆಶ್ರಮದಲ್ಲಿರುವಾಗ ಒಂದು ದಿನ ಕುಬೇರನು ಪುಷ್ಪಕ ವಿಮಾನದಲ್ಲಿ ತಂದೆಯನ್ನು ನೋಡಲು ಬಂದನು. ಕುಬೇರನ ತೇಜಸ್ಸನ್ನೂ ಐಶ್ವರ್ಯವನ್ನೂ ನೋಡಿ ಅಸೂಯೆ ಪಟ್ಟ ಕೈಕಸಿ ಹಿರಿಯ ಮಗನಾದ ರಾವಣನನ್ನು ನೋಡಿ, "ನಿನ್ನ ಅಣ್ಣನಾದ ಕುಬೇರನ ವೈಭವ ನೋಡಿದೆಯಾ ದಶಗ್ರೀವಾ? ನೀನು ಕೂಡಾ ಆ ತಂದೆಗೆ ಹುಟ್ಟಿದವನು ತಾನೆ? ನೀನು ಹೇಗಿರುವಿ? ನೀನು ಹೇಗಾದರೂ ನಿನ್ನ ಆ ಅಣ್ಣನ ಹಾಗೆ ಆದರೇನೇ ನನಗೆ ಸಂತೋಷವಪ್ಪಾ" ಎಂದಳು.

ಅತ್ಯಂತ ರೋಷಗಾರನೂ ಬಲಿಷ್ಠನೂ ಆದ ರಾವಣನಿಗೆ ತಾಳಲಾಗದಷ್ಟು ರೋಷ ಬಂದಿತು. ಅವನು ತನ್ನ ತಾಯಿಯೊಂದಿಗೆ, "ಅಮ್ಮಾ, ನಾನು ನನ್ನ ಅಣ್ಣನ ಸಮಾನನೋ, ಅವನಿಗಿಂತಲೂ ಹೆಚ್ಚಿನವನೋ ಆಗದೆ ಬಿಡಲಾರೆನು. ನೋಡುತ್ತಾ ಇರು, ಚಿಂತಿಸಬೇಡಮ್ಮಾ" ಎಂದು ಪ್ರತಿಜ್ಞೆ ಮಾಡಿದನು. ಅವನು ಕುಂಭಕರ್ಣನೊಂದಿಗೆ ಕೂಡಿ ಮಹತ್ತರವಾದ ಕಾರ್ಯಗಳನ್ನು ಮಾಡಬೇಕೆಂದು ಸಂಕಲ್ಪಿಸಿಕೊಂಡನು. ಹಾಗೆಯೇ ವಿಭೀಷಣನನ್ನೂ ಒಪ್ಪಿಸಿದನು. ಆ ಮೂವರು ಸಹೋದರರೂ ಕೂಡಿ ಗೋಕರ್ಣಾಶ್ರಮಕ್ಕೆ ಹೋಗಿ ಅಲ್ಲಿ ತಪಸ್ಸಿಗೆ ಕುಳಿತರು. ರಾವಣನು ಬಹು ತೀವ್ರವಾದ ನಿಷ್ಠೆಯಿಂದ ತಪಸ್ಸು ಮಾಡುತ್ತಿರಲು, ಕುಂಭಕರ್ಣ, ವಿಭೀಷಣರೂ ಹಾಗೆಯೇ ಮಾಡುತ್ತಿದ್ದರು.

ರಾವಣನು ನಿರಾಹಾರಿಯಾಗಿ ಹತ್ತು ಸಾವಿರ ವರ್ಷಗಳವರೆಗೆ ತಪಸ್ಸು ಮಾಡಿದನು. ಅವನು ಸಾವಿರ ವರ್ಷಗಳಿಗೆ ಒಂದು ತಲೆಯಂತೆ ತನ್ನ ಒಂದೊಂದು ತಲೆಯನ್ನು ಕಡಿದು ಅಗ್ನಿಗೆ ಹಾಕಿದನು. ಅವನ ಹತ್ತು ತಲೆಗಳಲ್ಲಿ ಒಂಬತ್ತು ತಲೆಗಳು ಹಾಗೆ ಅಗ್ನಿಗೆ ಆಹುತಿಯಾದವು. ಒಂದು ತಲೆ ಮಾತ್ರವೇ ಉಳಿದಿತ್ತು. ಹತ್ತನೇ ಸಾವಿರ ವರ್ಷ ಮುಗಿಯುವಾಗ ಅವನು ಉಳಿದಿದ್ದ ತಲೆಯನ್ನೂ ಕಡಿಯಲು ನೋಡುವಾಗ ಬ್ರಹ್ಮನು ದಿಕ್ಪಾಲಕರೊಂದಿಗೆ ಅವನ ಮುಂದೆ ಪ್ರತ್ಯಕ್ಷನಾಗಿ, "ಓ! ದಶಗ್ರೀವಾ! ನಿನ್ನ ತಪಸ್ಸಿಗೆ ಮೆಚ್ಚಿದ್ದೇನೆ. ನಿನಗೆ ಇಷ್ಟವಾದ ವರವನ್ನು ಕೇಳಿಕೋ" ಎಂದನು.

ರಾವಣನು ಪರಮಾನಂದಭರಿತನಾಗಿ, ಬ್ರಹ್ಮನಿಗೆ ಸಾಷ್ಟಾಂಗ ಎರಗಿ, "ತಾತಾ, ಪ್ರಾಣಿಗಳಿಗೆ ಮರಣ ಭಯಕ್ಕಿಂತ ಹೆಚ್ಚಿನ ಭಯವು ಬೇರೊಂದಿಲ್ಲ. ನನಗೆ ಮರಣವಿಲ್ಲದಂತೆ ವರ ಕೊಡು" ಎಂದನು.

"ಅಪ್ಪಾ, ಅಂತಹ ವರವನ್ನು ಕೊಡಲು ಸಾಧ್ಯವಾಗದು. ಬೇರೆ ವರವನ್ನು ಕೇಳು" ಎಂದನು ಬ್ರಹ್ಮದೇವ.

"ಹಾಗಾದರೆ ಇತರ ಪ್ರಾಣಿಗಳ ಭಯ ನನಗಿಲ್ಲ. ನನಗೆ ನನ್ನವರಿಂದ, ನಾಗರಿಂದ, ಯಕ್ಷರಿಂದ ದೈತ್ಯರಿಂದ, ದಾನವರಿಂದ, ರಾಕ್ಷಸರಿಂದ ಸಾವು ಬಾರದಂತೆ ವರವನ್ನು ಕೊಡು. ಮನುಷ್ಯರೇ ಮೊದಲಾದ ಅಲ್ಪ ಪ್ರಾಣಿಗಳ ಬಗ್ಗೆ ನನಗೇನೂ ಚಿಂತೆಯಿಲ್ಲ. ಅವರೆಲ್ಲಾ ಹುಲ್ಲಿಗೆ ಸಮಾನರು" ಎಂದನು ರಾವಣ.

ರಾವಣನು ಕೇಳಿಕೊಂಡಂತೆ ಬ್ರಹ್ಮನು ವರವನ್ನು ಕೊಟ್ಟನು. ಆ ವರದೊಂದಿಗೆ ರಾವಣನಿಗೆ ಹತ್ತು ತಲೆಗಳೂ ಬರುವಂತೆ ಮಾಡಿ, ಇಚ್ಛಿಸಿದ ರೂಪ ತಾಳುವಂತೆಯೂ ಬ್ರಹ್ಮನು ವರಕೊಟ್ಟನು.

ತರುವಾಯ ಬ್ರಹ್ಮನು ವಿಭೀಷಣನನ್ನು ಏನು ವರಬೇಕೆಂದು ಕೇಳಿದನು. ತನ್ನ ಮನಸ್ಸು ಧರ್ಮ ಮಾರ್ಗ ತಪ್ಪದಂತಿರಬೇಕೆಂದೂ, ತನಗೆ ಬ್ರಹ್ಮಾಸ್ತ್ರವು ಸ್ಫುರಿಸಬೇಕೆಂದೂ ವಿಭೀಷಣನು ವರ ಕೇಳಿದನು. ಬ್ರಹ್ಮನು ಅವನಿಗೆ ಹಾಗೆಯೇ ವರವಿತ್ತು, ಮರಣವಿಲ್ಲದಂತೆಯೂ ವಿಶೇಷ ವರವನ್ನೂ ಕೊಟ್ಟನು.

ಆಮೇಲೆ ವರ ಕೇಳುವ ಸರದಿ ಕುಂಭಕರ್ಣನ ದಾಯಿತು.

ಆಗ ದೇವತೆಗಳು ಬ್ರಹ್ಮನೊಂದಿಗೆ, "ದೇವಾ, ಕುಂಭಕರ್ಣನಿಗೆ ಮಾತ್ರ ವರ ಕೊಡಬಾರದು. ಅವನು ನಂದನವನದಲ್ಲಿ ವಿಹರಿಸುವ ಏಳು ಮಂದಿ ಅಪ್ಸರಸಿಯರನ್ನು ನುಂಗಿಬಿಟ್ಟನು. ದೇವೇಂದ್ರನ ಹತ್ತು ಮಂದಿ ಅನುಚರರನ್ನು ತಿಂದಿದ್ದಾನೆ. ಎಷ್ಟು ಋಷಿಗಳನ್ನೂ, ಮುನಿಗಳನ್ನೂ ತಿಂದಿದ್ದಾನೋ ಲೆಕ್ಕವಿಲ್ಲ. ವರಗಳನ್ನು ಪಡೆಯುವ ಮೊದಲೇ ಅವನು ಹಾಗಿರುವಾಗ ವರ ಪಡೆದ ಮೇಲೆ ಹೇಗಾಗುವನೋ ?" ಎಂದರು.

ಆಗ ಸರಸ್ವತಿಯ ಪ್ರಭಾವದಿಂದ ಕುಂಭಕರ್ಣನು "ತಾತಾ, ನನಗೆ ವರ್ಷಗಟ್ಟಲೆ ನಿದ್ದೆ ಬರುವ ಹಾಗೆ ವರ ಕೊಡು" ಎಂದು ಕೇಳಲು, ಬ್ರಹ್ಮನು "ತಥಾಸ್ತು" ಎಂದು ಹೇಳಿ ಅದೃಶ್ಯನಾದನು. ಕುಂಭಕರ್ಣನ ನಾಲಗೆಯಾಡಿಸಿದ ಸರಸ್ವತಿಯೂ ಹೊರಟುಹೋದಳು.

ಕೂಡಲೇ ಕುಂಭಕರ್ಣನಿಗೆ ಜ್ಞಾನ ಬಂದು, "ಛೀ ! ಛೀ ! ಈ ಬಗೆಯ ವರವನ್ನು ಕೇಳಿದೆನೇಕೆ ? ಏನಾಯಿತು ನನಗೆ ? ದೇವತೆಗಳೇ ಏನೋ ಮೋಸ ಮಾಡಿಬಿಟ್ಟರು !" ಎಂದು ಬಹಳವಾಗಿ ಚಿಂತಿಸಿದನು.

ಹೀಗೆ ರಾವಣ, ಕುಂಭಕರ್ಣ, ವಿಭೀಷಣರು ಬ್ರಹ್ಮನಿಂದ ವರಗಳನ್ನು ಪಡೆದು ಶ್ಲೇಷ್ಮಾತಕ ವೆಂಬ ವನಕ್ಕೆ ಹೋಗಿ ಅಲ್ಲಿ ವಾಸಮಾಡಲು ತೊಡಗಿದರು.



# ವರ ನಿರ್ಣಯ

**ವೆಂ**ಕಟಾಚಲನು ಮಧ್ಯಮ ತರಗತಿಯ ಗೃಹಸ್ಥ. ಅವನು ಮದುವೆಯ ವಯಸ್ಸಿಗೆ ಬಂದ ಮಗಳ ಮದುವೆಯ ಪ್ರಯತ್ನ ಮಾಡುತ್ತ ಯಾರೋ ಹೇಳಿದಂತೆ ಬೀರ್ನಹಟ್ಟಿ, ಕಾರ್ನಹಾಡಿ ಎಂಬ ಎರಡು ಗ್ರಾಮಗಳಿಗೆ ಹೋಗಿ ವರರನ್ನು ನೋಡಿ ಬಂದನು.

ಹಾಗೆ ಹಿಂದಿರುಗಿ ಬಂದ ಅವನು, ಮಗಳ ಹತ್ತಿರ, "ಅಮ್ಮಾ, ಬೀರ್ನಹಟ್ಟಿಯ ಹುಡುಗ ಚೆನ್ನಾಗೇ ಇದ್ದಾನೆ. ಅವನ ಬಂಧುಗಳು ಕೆಟ್ಟವರೆಂದೂ, ಸ್ನೇಹಿತರು ಒಳ್ಳೆಯವರೆಂದೂ ಗೊತ್ತಾಗಿದೆ.

"ಇನ್ನು ಕಾರ್ನಹಾಡಿಯ ಹುಡುಗನ ಸಂಗತಿ, ಅವನ ಬಂಧುಗಳೆಲ್ಲಾ ಒಳ್ಳೆಯವರೇ. ಆದರೆ ಅವನ ಸ್ನೇಹಿತರು ಮಾತ್ರ ಕೆಟ್ಟ ಪೋಕರಿಗಳು. ಈ ಇಬ್ಬರು ವರಗಳಲ್ಲಿ ನೀನು ಯಾರನ್ನು ಆರಿಸುವಿಯೋ ಹೇಳಿ ಬಿಡು" ಎಂದನು.

"ಬೀರ್ನಹಟ್ಟಿಯ ಸಂಬಂಧವನ್ನೇ ಖಾಯಂ ಮಾಡಿರಿ ಅಪ್ಪಾ" ಎಂದಳು ಮಗಳು ಸ್ವಲ್ಪವೂ ಶಂಕಿಸದೆ.

"ಕಾರ್ನಹಾಡಿಯವನನ್ನು ಬಿಟ್ಟು, ಬೀರ್ನಹಟ್ಟಿಯವನನ್ನು ಏಕೆ ಆರಿಸಿಕೊಳ್ಳುವೆಯಮ್ಮಾ ?" ಎಂದು ಕೇಳಿದನು ವೆಂಕಟಾಚಲ.

"ಬಂಧುಗಳನ್ನು ದೇವರು ನಿರ್ಣಯಿಸುತ್ತಾರೆ. ಆದರೆ ಸ್ನೇಹಿತರನ್ನು ಆರಿಸಿಕೊಳ್ಳುವುದು ನಮ್ಮ ಕೈಯಲ್ಲಿರುವಂಥಾದ್ದು. ಒಬ್ಬರಿಗಿರುವ ಸ್ನೇಹಿತರನ್ನು ಹಿಡಿದು ಅವರ ಗುಣ ಎಂತಹುದೋ ಕಂಡುಹಿಡಿಯಬಹುದು; ಅಲ್ಲವೇ ಅಪ್ಪಾ ?" ಎಂದಳು ಮಗಳು ನಗುತ್ತ.





# ಧರ್ಮಪ್ಪನ ಊದೆ

ಚಂದ್ರಪಾಳ್ಯದಲ್ಲಿರುವ ಧರ್ಮಪ್ಪನಿಗೆ ಒಂದು ಒಳ್ಳೆಯ ಕುದುರೇ ಗಾಡಿ ಇದ್ದಿತು. ಪಕ್ಕದಲ್ಲಿರುವ ಪಟ್ಟಣದಲ್ಲಿ ಏನಾದರೂ ಕೆಲಸವಿದ್ದು ಹೋಗಿ ಬರುವ ಗ್ರಾಮಸ್ಥರಿಗೆ ಅವನು ತನ್ನ ಕುದುರೇ ಗಾಡಿಯನ್ನು ಬಾಡಿಗೆಗೆ ಬಿಡುತ್ತಿದ್ದನು. ಅವನ ಗಾಡಿಯಂತಹುದು ಬೇರೆ ಇಲ್ಲದ್ದರಿಂದ, ಅವನೂ ಹೆಚ್ಚು ಬಾಡಿಗೆ ಕೇಳದಿರುವುದರಿಂದ ಜನರಿಗೆ ಅವನ ಮೇಲೆ ಒಂದು ಬಗೆಯ ಅಭಿಮಾನವಿತ್ತು.

ಒಂದುಸಾರಿ ಧರ್ಮಪ್ಪನು ಪ್ರಯಾಣಿಕರನ್ನು ಪಟ್ಟಣದಲ್ಲಿ ಇಳಿಸಿ ತನ್ನ ಗ್ರಾಮಕ್ಕೆ ಹಿಂದಿರುಗಿ ಹೊರಟನು. ಆ ಸಮಯದಲ್ಲಿ ಸಾಹುಕಾರ ರಂಗಯ್ಯನು ಅವನನ್ನು ನೋಡಿ, "ಏನು ಧರ್ಮಪ್ಪಾ, ಪ್ರಯಾಣ ನಿನ್ನ ಗ್ರಾಮಕ್ಕೆ ತಾನೆ ?" ಎಂದು ಕೇಳಿದನು.

ಹೌದೆಂದನು ಧರ್ಮಪ್ಪ. ರಂಗಯ್ಯ ಸಂತೋಷ ದಿಂದ ಕೈಯಲ್ಲಿದ್ದ ಚೀಲವನ್ನು ಮೊದಲು ಗಾಡಿ ಯಲ್ಲಿಟ್ಟು, ಆಮೇಲೆ ತಾನು ಹತ್ತಿ ಕುಳಿತುಕೊಳ್ಳುತ್ತ, "ಇಲ್ಲಿ ನನಗೆ ಬರಬೇಕಾದ ಬಾಕಿಗಳನ್ನು ವಸೂಲು ಮಾಡಿಕೊಳ್ಳುವಾಗ ಬಹಳ ತಡವಾಗಿ ಹೋಯಿತು. ಎಲ್ಲಿಯಾದರೂ ಬಾಡಿಗೆ ಗಾಡಿ ಸಿಗುವುದೋ ಎಂದು ನೋಡುವಾಗ ನೀನು ಕಾಣಿಸಿದೆಯಪ್ಪಾ. ಚೆಲೋ ದಾಯಿತು. ನಿನ್ನ ಗಾಡಿಯಷ್ಟು ಒಳ್ಳೇ ಗಾಡಿ ಸಿಕ್ಕಿದ್ದು ನನ್ನ ಪುಣ್ಯ. ಇನ್ನು ಕತ್ತಲೆಯಾಗುವುದರೊಳಗೆ ಕಷ್ಟವಿಲ್ಲದೆ ಊರು ಸೇರಬಹುದು" ಎಂದನು.

ಗಾಡಿ ಅಲ್ಲಿಂದ ಹೊರಟಿತು. ಸ್ವಲ್ಪದೂರ ಹೋಗುವಷ್ಟರಲ್ಲಿ ಊರಿನ ಮಣಿಸರಕಿನಂಗಡಿ ಗೋವಿಂದನು ಬೇಗ ಬೇಗನೆ ಬರುತ್ತ ಗಾಡಿಯನ್ನು ನಿಲ್ಲಿಸಿದನು.

"ಸಮಯಕ್ಕೆ ಕಾಣಿಸಿದಿ ಧರ್ಮಪ್ಪಾ, ಸರಕು ಕೊಂಡುಕೊಂಡು ಗಾಡಿಗಾಗಿ ನೋಡುತ್ತಿದ್ದೆ. ಪುಣ್ಯವಶಾತ್ ನಿನ್ನ ಗಾಡಿಯೇ ಸಿಕ್ಕಿತು. ಎಂದವನೇ ಗೋವಿಂದನು ನಾಲ್ಕು ಗೋಣೀ ಚೀಲಗಳನ್ನು ಗಾಡಿಯೊಳಗೆ ಹಾಕಿ, ಸೊಂಟದಲ್ಲಿ ಕಟ್ಟಿಕೊಂಡಿದ್ದ ಹಣದ ಚೀಲವನ್ನು ತಡವಿಕೊಳ್ಳುತ್ತ ಗಾಡಿಯಲ್ಲಿ ಏರಿಕೊಂಡನು.

ಕುದುರೇಗಾಡಿ ಪಟ್ಟಣದ ಮೇರೆಯನ್ನು ದಾಟು ವಷ್ಟರಲ್ಲಿ, ಮತ್ತಿಬ್ಬರು ಗಾಡಿಯನ್ನು ನಿಲ್ಲಿಸಿ ಹತ್ತಿ ಕುಳಿತರು. ಅವರಿಬ್ಬರೂ ಚಂದ್ರಪಾಳ್ಯದವರೇ.

ಕೆ. ಎನ್. ಆಂಜನೇಯ

ಒಬ್ಬನು ಆ ಊರಿನ ಶಾಲೆಯ ಮಾಸ್ತರು ರಾಮಾಚಾರಿ. ಅವನು ಬಟ್ಟೆಗಳ ಅಂಗಡಿಯ ಹಳೆಯ ಬಾಕಿ ತೀರಿಸಲು ಹೋಗಿ, ತಂದುಕೊಂಡ ಹಣ ಸಾಲದೆ, ಯಾರೋ ಪರಿಚಿತರಿಂದ ಕೈಗಡ ತೆಗೆದುಕೊಂಡು ಬಾಕಿ ತೀರಿಸಿ ಮನೆಗೆ ಹಿಂದಿರುಗುತ್ತಿದ್ದನೆಂದು ಅವನ ಮಾತಿನಿಂದ ತಿಳಿಯಿತು.

ಎರಡನೆಯವನು ಬೇಸಾಯದ ಕೂಲೀ ರಾಜಪ್ಪ. ಅವನು ಪಟ್ಟಣದಲ್ಲಿ ಒಂದು ಅಂಗಡಿಯಲ್ಲಿ ಯಾವುದನ್ನೋ ಅಡವಿಟ್ಟು ಮನೆಯ ಖರ್ಚುಗಳಿಗೆ ನೂರು ವರಹಗಳನ್ನು ಪಡೆದುಕೊಂಡು ಗ್ರಾಮಕ್ಕೆ ಹಿಂದಿರುಗುತ್ತಿದ್ದಾನಂತೆ. ಹೀಗೆ ಕೆಲವರಿಗೆ ಅವರವರ ಬವಣೆ ಹೇಳಿಕೊಳ್ಳುವುದೊಂದು ಸಮಾಧಾನದ ಸಂಗತಿ.

ಒಬ್ಬನಿಗೆ ನಾಲ್ವರು ಜತೆಗೂಡಿದುದರಿಂದ ಪ್ರಯಾಣವು ಬಹಳ ಉಲ್ಲಾಸವಾಗಿ ಸಾಗಿತು. ಸೂರ್ಯನು ಮುಳುಗುವ ಹೊತ್ತಿನಲ್ಲಿ ಕುದುರೇ ಗಾಡಿ ಗ್ರಾಮವನ್ನು ತಲಪಿತು. ನಾಲ್ವರೂ ಗಾಡಿಯಿಂದಿಳಿದು ಧರ್ಮಪ್ಪನಿಗೆ ಸೇರಬೇಕಾದ ಬಾಡಿಗೆಯ ಹಣವನ್ನು ಕೊಟ್ಟು ಅವರವರ ದಾರಿ ಹಿಡಿದು ತಮ್ಮ ತಮ್ಮ ಸಾಮಾನುಗಳೊಂದಿಗೆ ಹೊರಟುಹೋದರು.

ಮರುದಿನ ಬೆಳಿಗ್ಗೆ ಧರ್ಮಪ್ಪನು ತನ್ನ ಗಾಡಿಗೆ ಕುದುರೆಯನ್ನು ಕಟ್ಟಿಕೊಂಡಿರುವಾಗ ಗಾಡಿಯೊಳಗೆ ತಳತಳನೆ ಹೊಳೆಯುತ್ತಿದ್ದ ಕೆಲವು ವರಹಗಳಿರುವುದು ಕಂಡಿತು. ಅವನು ಆಶ್ಚರ್ಯಪಡುತ್ತ ಅವುಗಳನ್ನು ಎಣಿಸಿ ನೋಡಿದನು. ಒಟ್ಟು ಎಂಬತ್ತು ವರಹಗಳು ಗಾಡಿಯಲ್ಲಿ ಕೇಳುವವರಿಲ್ಲದಂತೆ ಬಿದ್ದಿದ್ದುವು ದೊಡ್ಡ ಮೊತ್ತವೇ ! ಅವುಗಳನ್ನು ನೋಡಿ ಧರ್ಮಪ್ಪನಿಗೆ ಯೋಚನೆ ಹಿಡಿಯಿತು.

ಮುಂಚಿನ ದಿನ ತನ್ನ ಗಾಡಿಯಲ್ಲಿ ಏರಿದವ ನಾಲ್ವರಲ್ಲಿ ಒಬ್ಬನದಾಗಿರಬೇಕೆಂದು ಧರ್ಮಪ್ಪನು ಊಹಿಸಿಕೊಂಡನು. ನೀತಿವಂತನಾದ ಧರ್ಮಪ್ಪನು ಅವುಗಳು ಯಾರದೋ ಅವರಿಗೆ ಕೊಟ್ಟುಬಿಡಬೇಕೆಂದು ಅಂದುಕೊಂಡನು. ಆದರೆ ಅವು ಯಾರದೆಂದು ತಿಳಿದುಕೊಳ್ಳುವ ಬಗೆ ಹೇಗೆ ? ಹೋಗಿ





ಕೇಳಿದರೂ ನಾಲ್ವರೂ ಅವು ತಮ್ಮದೆಂದೇ ಹೇಳಿದರೆ ಹೇಗೆ ನಂಬುವುದು ? ಪಟ್ಟಣಕ್ಕೆ ಹೋಗಿ ಬರುವವರ ಹತ್ತಿರ ಅಷ್ಟೋ ಇಷ್ಟೋ ಹಣವಿದ್ದೇ ಇದ್ದೀತು. ಆದರೆ ಇದು ನಾಲ್ವರದೂ ಆಗಿರಲಿಕ್ಕಿಲ್ಲ. ಯಾರೋ ಒಬ್ಬರದೇ ಆಗಿರಬೇಕು.

ಏನು ಮಾಡುವುದೆಂದು ಧರ್ಮಪ್ಪನು ತೀವ್ರವಾಗಿ ಆಲೋಚನೆ ಮಾಡಿದನು. ಹಾಗೆಯೇ ಆ ದಿನವಿಡೀ ಕಳೆದುಹೋಯಿತು.

ಮರುದಿನ ಬೆಳಿಗ್ಗೆ ಒಂದು ನಿಶ್ಚಯಕ್ಕೆ ಬಂದು ಧರ್ಮಪ್ಪನು ಆ ವರಹಗಳನ್ನು ಚಿಕ್ಕಮೂಟೆಯಾಗಿ ಕಟ್ಟಿಕೊಂಡು ಸಾಹುಕಾರ ರಂಗಯ್ಯನ ಮನೆಗೆ ಹೋಗಿ, "ನಮಸ್ಕಾರ ಸಾಹುಕಾರ್ರೇ !" ಎಂದನು.

ರಂಗಯ್ಯನು ಮನೆಯ ಜಗಲಿಯಲ್ಲೇ ಕುಳಿತಿದ್ದನು. ಧರ್ಮಪ್ಪ ಅವನ ಹತ್ತಿರ ಹೋಗಿ, "ಅಯ್ಯಾ, ನನ್ನ ಗಾಡಿಯಲ್ಲಿ ಕೆಲವು ವರಹಗಳು ಸಿಕ್ಕಿವೆ. ಅವುಗಳನ್ನೆಲ್ಲಾ ಸೇರಿಸಿ ಗಂಟು ಕಟ್ಟಿದ್ದೇನೆ. ಬಹುಶಃ ಅವು ನಿಮ್ಮದೇ ಆಗಿರಬೇಕೆಂದು ಅನುಮಾನ. ಅದಕ್ಕೇ ಬಂದೆ. ನಿಮ್ಮನ್ನು ಕೇಳಿ, ಆಮೇಲೆ ಬೇರೆ ವಿಚಾರ ಅಂದುಕೊಂಡಿದ್ದೇನೆ" ಎಂದನು. ಹಾಗೆಯೇ ವರಹಗಳ ಗಂಟನ್ನು ಅವನ ಮುಂದಿಟ್ಟನು.

ರಂಗಯ್ಯ ಗಂಟನ್ನು ತೆಗೆದುಕೊಂಡು ಆಕೈಯಿಂದ ಈಕೈಗೆ ಹಾಕಿಕೊಂಡು ಬಳಿಕ ಆ ಗಂಟನ್ನು ಜಗಲಿಯಲ್ಲೇ ಇಟ್ಟು ಒಳಗೆ ಹೋಗಿ ಕಾಲುಗಂಟೆಯ ಮೇಲೆ ಹಿಂದಿರುಗಿ ಬಂದು, "ಹೌದು, ಈ ಹಣ ನನ್ನದೇ ಧರ್ಮಪ್ಪಾ. ಸಂದೇಹವೇನಿಲ್ಲ. ಎಂಬತ್ತು ವರಹಗಳು ತಾನೆ ?" ಎಂದನು.

"ಹೌದು ಸ್ವಾಮಿ ! ಸರಿಯಾಗಿ ಎಂಬತ್ತು ವರಹಗಳು ಇದರಲ್ಲಿವೆ. ಎಣಿಸಿ ನೋಡಿರಿ !" ಎಂದನು ಧರ್ಮಪ್ಪ.

ಸಾಹುಕಾರ ರಂಗಯ್ಯ ಹಣದ ಗಂಟನ್ನು ತೆಗೆದುಕೊಂಡು, "ಮೊನ್ನೆ, ನಿನ್ನ ಗಾಡಿಯಲ್ಲಿ ಏರಿದಾಗ ನನ್ನ ಕೈಯಲ್ಲಿ ಪಟ್ಟಣದಲ್ಲಿ ವಸೂಲು ಮಾಡಿಕೊಂಡ ಹಣದ ಚೀಲವಿತ್ತಲ್ಲವೆ ? ಅದು ಒಂದು ಮೂಲೆಯಲ್ಲಿ ಇಟ್ಟಿದ್ದಕ್ಕೆ ಬಗೆದು ಹೋಗಿತ್ತು. ಅದನ್ನು ನಾನು ಗಮನಿಸಲೇ ಇಲ್ಲ. ಈಗ ನೋಡಿದೆನು. ನಿನ್ನ ಗುಣ ನನಗೆ ಗೊತ್ತು. ಅದಿರಲಿ ಧರ್ಮಪ್ಪಾ. ಈ ಹಣ ನನ್ನದೇ ಎಂದು ನೀನು ಹೇಗೆ ಊಹಿಸಿದೆ ? ಮೊದಲು ಇಲ್ಲಿಗೇ ಬಂದೆ ಹೇಗೆ ?" ಎಂದು ಪ್ರಶ್ನಿಸಿದನು.

ಧರ್ಮಪ್ಪ ಮುಗುಳು ನಗುತ್ತ, "ಆ ಹಣ ನಿನ್ನೆ ಬೆಳಿಗ್ಗೆಯೇ ನನ್ನ ಗಾಡಿಯಲ್ಲಿರುವುದು ಕಂಡಿತು. ಮುಂಚಿನ ದಿನ ಸಾಯಂಕಾಲ ನನ್ನ ಗಾಡಿಯಲ್ಲಿ ಏರಿದ ನಾಲ್ಕು ಜನರಲ್ಲಿ ಒಬ್ಬರದಾಗಿರಬೇಕೆಂದು ತೋರಿತು. ಅದು ಅಂಗಡಿ ಗೋವಿಂದನದಾಗಿರಲು ಅವಕಾಶವಿಲ್ಲ. ಏಕೆಂದರೆ ಆತ ಹಣದ ವಿಷಯದಲ್ಲಿ ಎಷ್ಟು ಜಾಗರೂಕನಾದವನೆಂದು ಎಲ್ಲರಿಗೂ

ಗೊತ್ತಿದೆ. ಅಷ್ಟೇ ಅಲ್ಲದೆ ಗಾಡಿಯಲ್ಲಿದ್ದಷ್ಟು ಹೊತ್ತೂ, ತನ್ನ ಸೊಂಟದಲ್ಲಿರುವ ಹಣದ ಚೀಲವನ್ನು ತಡವಿಕೊಂಡೇ ಇದ್ದನು. ಅವನು ಯಾವಾಗಲೂ ಅಷ್ಟು ಎಚ್ಚರಿಕೆಯುಳ್ಳವನೇ" ಎಂದನು.

"ಹೌದು. ಅದನ್ನು ನಾನೂ ಗಮನಿಸಿದ್ದೇನೆ. ಬಹಳ ಜಾಗರೂಕತೆಯ ಮನುಷ್ಯ. ಹಾಗೇ ಇರಬೇಕು ಅನ್ನು" ಎಂದನು ಸಾವುಕಾರ ರಂಗಯ್ಯ ಮುಗುಳು ನಗುತ್ತ.

"ಇನ್ನು ಆ ಹಣ ಬೇಸಾಯದ ಕೂಲೀಗಾರ ರಾಜಪ್ಪನದಾಗಲೂ ಸಾಧ್ಯವಿಲ್ಲ. ಅವನು ಯಾವುದನ್ನೋ ಅಡವಿಟ್ಟು ನೂರು ವರಹ ಸಾಲತಂದುಕೊಂಡವನು. ಒಂದು ವೇಳೆ ಅವರಿಂದ ಸ್ವಲ್ಪ ಹಣ ಚೆಲ್ಲಿ ಹೋಗಿದ್ದರೆ, ಮನೆಗೆ ಹೋದ ಕೂಡಲೇ ಹಣ ಲೆಕ್ಕ ಮಾಡುತ್ತಾನೆ. ಒಮ್ಮೆಗೇ ಅಷ್ಟು ಹಣ ಕಾಣದಾದರೆ ಕೂಡಲೇ ನನ್ನ ಹತ್ತಿರ ಓಡಿಬರುತ್ತಾನೆ. ಆದ್ದರಿಂದ ಇದು ಅವನದಲ್ಲವೆಂದುಕೊಂಡೆ" ಎಂದನು ಧರ್ಮಪ್ಪ.

"ಹೌದು. ಸಂಗತಿ ಸಂದರ್ಭಗಳನ್ನು ಚೆನ್ನಾಗಿಯೆ ತರ್ಕಿಸಿರುವಿ" ಎಂದನು ರಂಗಯ್ಯ.

"ಇನ್ನು ರಾಮಾಚಾರಿ ಮಾಸ್ತರು. ಅವರು ಬಟ್ಟೆಗಳ ಅಂಗಡಿಗೆ ಬಾಕಿಯಾಗಿದ್ದ ಹಣ ಕೊಡಲಿಕ್ಕೆ ಹೋಗಿ, ಹಣ ಸಾಲದೆ ಮತ್ತಾರನ್ನೋ ಕೇಳಿ ಕೈಗಡ, ತೆಗೆದುಕೊಂಡವರು. ಅಂಥವರ ಹತ್ತಿರ ಎಂಬತ್ತು ವರಹ ಹೇಗೆ ಇದ್ದೀತು ? ಕಡೆಗೆ ಉಳಿದವರು ನೀವು. ಪಟ್ಟಣದಲ್ಲಿ ಲೆಕ್ಕ ಮಾಡಿಕೊಂಡು, ಕೊಡಬೇಕಾದವರಿಂದ ಎಣಿಸಿ ತೆಗೆದುಕೊಂಡ ಹಣವನ್ನು ಮನೆಗೆ ಬಂದ ಕೂಡಲೇ ಲೆಕ್ಕ ಮಾಡಿಕೊಳ್ಳುವಷ್ಟು ಅವಸರವೋ ಅಗತ್ಯವೋ ನಿಮಗೆ ಇರಲಿಕ್ಕಿಲ್ಲ. ಆದುದರಿಂದ ಆ ಎಂಬತ್ತು ವರಹಗಳೂ ನಿಮ್ಮದೇ ಅಂದುಕೊಂಡೆನು. ಅದರ ಮೇಲೆ ನೀವು ನನ್ನನ್ನು ಈಗ ನೋಡಿದ ಕೂಡಲೇ ಎಷ್ಟು ಹಣವಿದೆಯೆಂದು ಕೇಳದೆ ಒಳಗೆ ಹೋಗಿ ಚೀಲದ ಹಣವನ್ನು ಲೆಕ್ಕ ಮಾಡಿ ನೋಡಿದ್ದೀರಿ. ಈಗಲಷ್ಟೇ ಚೀಲದ ಬದಿ ಬಗೆದು ಹೋಗಿರುವುದು ನಿಮಗೆ ಗೊತ್ತಾಗಿದೆ. ಹೊರಗೆ ಬಂದು ಎಂಬತ್ತು ವರಹಗಳು ತಾನೆ ? ಅಂತ ಕೇಳಿದಿರಿ. ಇನ್ನು ಆ ಹಣ ನಿಮ್ಮದೇ ಆಗಿರುವುದರಲ್ಲಿ ಸಂದೇಹವೇನಿದೆ ? " ಎಂದನು ಧರ್ಮಪ್ಪ.

ಧರ್ಮಪ್ಪನ ಆಲೋಚನೆಯ ಶಕ್ತಿಗೂ ಪ್ರಾಮಾಣಿಕತನಕ್ಕೂ ಬಹಳ ಸಂತೋಷಪಟ್ಟು ರಂಗಯ್ಯ ಸಾಹುಕಾರ ಆ ಎಂಬತ್ತು ವರಹಗಳ ಗಂಟನ್ನು ತಿರುಗಿ ಧರ್ಮಪ್ಪನಿಗೇ ಕೊಡುತ್ತ, "ಬೇಡವೆನ್ನದೆ ತಕ್ಕೋ ಧರ್ಮಪ್ಪಾ. ಸತ್ಪಾತ್ರನಾದ ನಿನಗೆ ಇದು ಮನಃಪೂರ್ವಕವಾಗಿ ನಾನು ಕೊಡುವ ಬಹುಮಾನ !" ಎಂದನು.





# ಎರಡು ದೇವತೆಗಳು

ಒಂದಾನೊಂದು ಗ್ರಾಮದಲ್ಲಿ ಇಬ್ಬರು ಅಣ್ಣ ತಮ್ಮಂದಿರಿದ್ದರು. ಅಣ್ಣನು ಭಾಗ್ಯವಂತನಾಗಿ ಯಾವ ಚಿಂತೆಯೂ ಇಲ್ಲದೆ ಚೆನ್ನಾಗಿದ್ದನು. ತಮ್ಮನು ದಾರಿದ್ರ್ಯದಿಂದ ಕಷ್ಟಪಡುತ್ತಾ ದಿನ ದೂಡಿಕೊಂಡಿದ್ದನು.

ಒಂದು ವರ್ಷ ಅಣ್ಣನ ಹೊಲಗಳಲ್ಲಿ ಕೊಯ್ಲು ಪೂರ್ತಿ ನಡೆದು ಮುಗಿಯಿತು. ಆ ಹೊಲಗಳಿಗೆ ಕಾವಲು ಕಾಯುವ ಕೆಲಸ ತಮ್ಮನದಾಗಿತ್ತು. ಅವನು ಒಂದು ಧಾನ್ಯಗಳ ರಾಶಿಯ ಹತ್ತಿರ ಕುಳಿತುಕೊಂಡು ತನ್ನ ದೀನಸ್ಥಿತಿಯನ್ನು ಕುರಿತು ಆಲೋಚಿಸಿಕೊಂಡಿದ್ದನು.

ಆಗ ಎಲ್ಲಿಂದಲೋ ಬಿಳೀ ಬಟ್ಟೆಯನ್ನುಟ್ಟು ಕೊಂಡಿದ್ದ ಸ್ತ್ರೀಯೊಬ್ಬಳು ಹೊಲಗಳಲ್ಲಿ ತಿರುಗುತ್ತ, ಕೆಳಗೆ ಚೆಲ್ಲಿದ ಕಾಳುಕದಿರುಗಳನ್ನು ಹೆಕ್ಕಿ ಗಿಡಗಳಿಗೆ ಅಂಟಿಸುವುದನ್ನು ನೋಡಿದನು.

ಅವಳು ಸಮೀಪಕ್ಕೆ ಬಂದ ಕೂಡಲೇ ತಮ್ಮನು ಎದ್ದು ಅವಳ ಹತ್ತಿರ ಹೋಗಿ, ಅವಳ ಕೈಯನ್ನು ಹಿಡಿದು, "ಯಾರಮ್ಮಾ ನೀನು ? ಇಲ್ಲಿ ನಿನಗೆ ಇದೇನು ಕೆಲಸ ? " ಎಂದು ಕೇಳಿದನು.

"ನಾನು ನಿನ್ನ ಅಣ್ಣನ ಭಾಗ್ಯದೇವತೆ. ಕೆಳಗೆ ಉದುರಿದ ಕದಿರುಗಳು ವ್ಯರ್ಥ ಆಗದಂತೆ ಗಿಡಗಳಿಗೆ ಅಂಟಿಸುತ್ತಿದ್ದೇನೆ" ಎಂದಳು.

"ಹೌದೇನು ? ಹಾಗಾದರೆ, ನನಗೂ ಒಬ್ಬಳು ಭಾಗ್ಯದೇವತೆ ಇರಬೇಕಷ್ಟೆ ? ಅವಳೆಲ್ಲಿದ್ದಾಳೆ ? " ಎಂದು ತಮ್ಮನು ಅವಳನ್ನು ಕೇಳಿದ.

"ಅಕೋ, ಅಲ್ಲಿ ದಕ್ಷಿಣ ದಿಕ್ಕಿನಲ್ಲಿ ಕಾಣುವ ಬೆಟ್ಟಗಳ ಆಚೆಗೆ ಅವಳಿದ್ದಾಳೆ" ಎಂದು ಭಾಗ್ಯ ದೇವತೆ ಅದೃಶ್ಯಳಾದಳು.

ಕೂಡಲೇ ತಮ್ಮನು ತನ್ನ ಭಾಗ್ಯದೇವತೆಯನ್ನು ಹುಡುಕುತ್ತ, ಹೋಗಲು ನಿಶ್ಚಯಿಸಿದನು. ಅವನು ತನ್ನ ಗುಡಿಸಲಿಗೆ ಹೋಗಿ ತನಗಿರುವ ಸ್ವಲ್ಪಮಾತ್ರ ಆಸ್ತಿಯನ್ನು ಮೂಟೆ ಕಟ್ಟಿಕೊಂಡು, ಬೆಟ್ಟದ ಕಡೆಗೆ ಹೊರಡಲು ಸಿದ್ಧನಾದನು.

ಆಗ ಒಲೆಯ ಹಿಂದಿನಿಂದ ದರಿದ್ರ ದೇವತೆ ಎದ್ದು ನಿಂತು, ಅವನ ಹತ್ತಿರ ಬಂದು, ದೊಡ್ಡ ದನಿಯಿಂದ ಅಳುತ್ತಾ, "ನನ್ನನ್ನು ಇಲ್ಲಿ ಬಿಟ್ಟು ಹೋಗುತ್ತೀಯಾ ? ನನ್ನನ್ನೂ ನಿನ್ನ ಜತೆಯಲ್ಲಿ ಕರೆದು ಕೊಂಡು ಹೋಗು" ಎಂದಳು.

ಬೊಹೀಮಿಯಾ ಜಾನಪದ ಕಥೆ

"ಬಹಳ ದೂರ ಹೋಗಬೇಕು. ನೀನಿನ್ನೂ ಚಿಕ್ಕವಳು. ಬೇಡ, ನಡೆಯಲಾರೆ" ಎಂದು ತಮ್ಮನು ಎಷ್ಟೋ ತಡೆ ಹೇಳಿ ನೋಡಿದನು. ಆದರೆ ಅವಳು ಪಟ್ಟು ಬಿಡಲಿಲ್ಲ.

ಕಡೆಗೆ ಅವನು "ಸರಿ, ಹಾಗೆಯೇ ಕರೆದು ಕೊಂಡು ಹೋಗುತ್ತೇನೆ. ಈ ಸೀಸೆಯೊಳಗೆ ಪ್ರವೇಶಿಸಿಬಿಡು. ನನ್ನ ವಸ್ತುಗಳೊಂದಿಗೆ ನಿನ್ನನ್ನು ಕೂಡಾ ಹಿಡಿದುಕೊಂಡು ಹೋಗುತ್ತೇನೆ" ಎಂದನು.

ಕೂಡಲೇ ದರಿದ್ರ ದೇವತೆ ಚಿಕ್ಕರೂಪ ತಾಳಿ ಸೀಸೆ ಯೊಳಗೆ ಪ್ರವೇಶಿಸಿದಳು. ತಮ್ಮನು ಸೀಸೆಗೆ ಗಟ್ಟಿ ಯಾಗಿ ಬಿರಡೆ ಬಿಗಿದು, ಮನೆಯಿಂದ ಹೊರಟನು. ದಾರಿಯಲ್ಲಿ ಒಂದು ಕಡೆಯಲ್ಲಿ ಕೆಸರಿನ ಹೊಂಡ ವಿರುವುದನ್ನು ನೋಡಿದನು. ದರಿದ್ರ ದೇವತೆ ಇರುವ ಸೀಸೆಯನ್ನು ಆ ಹೊಂಡದೊಳಗೆ ಆಳಕ್ಕೆ ಇಳಿಯುವಂತೆ ಒತ್ತಿ ತೂರಿಸಿ, ದರಿದ್ರ ದೇವತೆ ಯಿಂದ ಬಿಡುಗಡೆ ಹೊಂದಿ ಪ್ರಯಾಣ ಸಾಗಿಸಿದನು.

ಅವನು ದಕ್ಷಿಣ ದಿಕ್ಕಿನ ಬೆಟ್ಟಗಳನ್ನು ದಾಟಿ ಒಂದು ಪಟ್ಟಣವನ್ನು ತಲಪಿದನು. ಅಲ್ಲಿ ಒಬ್ಬ ದೊಡ್ಡ ಮನುಷ್ಯನು ತಮ್ಮನಿಗೆ ಕೆಲಸ ಕೊಡಲು ಒಪ್ಪಿಕೊಂಡನು.

"ನನಗೆ ಒಂದು ನೆಲಮಾಳಿಗೆಯನ್ನು ತೋಡಿ ಕೊಡಬೇಕು. ನಿನಗೆ ನಾನು ಸಂಬಳ ಅಂತ ಏನೂ ಕೊಡಲಾರೆ. ನೆಲ ಅಗೆಯುವಾಗ ಏನಾದರೂ ನಿಧಿ ನಿಕ್ಷೇಪ ಸಿಕ್ಕಿದರೆ ಅದು ನಿನಗೇ" ಎಂದನು ಆ ದೊಡ್ಡ ಮನುಷ್ಯ.

ತಮ್ಮನು ಅದಕ್ಕೆ ಒಪ್ಪಿಕೊಂಡು ನೆಲಮಾಳಿಗೆಗೆ ನೆಲ ಅಗೆಯಲಾರಂಭಿಸಿದನು. ಒಂದು ಗಂಟೆಯವರೆಗೆ ಅಗೆಯುವಷ್ಟರಲ್ಲಿ ಅವನಿಗೆ ಸ್ವಲ್ಪ ಬಂಗಾರವು ದೊರಕಿತು. ಆ ಬಂಗಾರವು ಅವನಿಗೇ ಎಂದು ದೊಡ್ಡ ಮನುಷ್ಯನು ಹೇಳಿದನಾದರೂ, ತಮ್ಮನು ಅದರಲ್ಲಿ ಅರ್ಧಭಾಗವನ್ನು ಅವನಿಗೆ ಕೊಟ್ಟನು.



ಇನ್ನೂ ಅಗೆಯುತ್ತ ಹೋಗಲು ನೆಲದಡಿಯಲ್ಲಿ ಒಂದು ಗೊಟ್ಟದಂತಹುದು ಮೇಲೆ ಬಿತ್ತು. ಅದ ರೊಳಗೆ ಬಂಗಾರದ ನಾಣ್ಯಗಳೂ ಮಣಿಗಳೂ ತುಂಬಾ ಸುರಿದಿಡಲ್ಪಟ್ಟಿದ್ದುವು. ಅದರೊಳಗೆ ಯಾರೋ "ಪೆಟ್ಟಿಗೆ ತೆರೆ, ಪೆಟ್ಟಿಗೆ ತೆರೆ" ಎಂದು ಕೂಗುವುದು ಅವನಿಗೆ ಕೇಳಿಸಿತು.

ತಮ್ಮನು ಗೊಟ್ಟದೊಳಗಿನ ಒಂದು ಸಣ್ಣ ಪೆಟ್ಟಿಗೆಯ ಮುಚ್ಚಳವನ್ನು ತೆರೆದನು.

ಅದರೊಳಗಿನಿಂದ ಒಬ್ಬಳು ಸ್ತ್ರೀ ಮೇಲೆ ಬಂದಳು. ಅವಳು ಕೂಡಾ ಬಿಳೀ ಬಟ್ಟೆಗಳನ್ನು ಧರಿಸಿಕೊಂಡಿದ್ದಳು.

"ನೀನು ಯಾರು?" ಎಂದು ಅವಳನ್ನು ಕೇಳಿದನು ತಮ್ಮ.

"ನಾನು ನಿನ್ನ ಭಾಗ್ಯದೇವತೆ. ನನ್ನನ್ನು ಹುಡುಕಲಿಕ್ಕೆ ತಾನೇ ನೀನು ಮನೆಯಿಂದ ಹೊರಟದ್ದಿ? ಇಂದಿನಿಂದ ನಾನು ನಿನ್ನನ್ನೂ ನಿನ್ನ

ಕುಟುಂಬವನ್ನೂ ಬಿಡದೆ ನೋಡಿಕೊಂಡಿರುತ್ತೇನೆ" ಎಂದು ಹೇಳಿ ಕೂಡಲೇ ಅದೃಶ್ಯಳಾದಳು.

ನೆಲದ ಅಡಿಯಲ್ಲಿ ಸಿಕ್ಕಿದ ನಿಧಿಯನ್ನು ತಮ್ಮನು ದೊಡ್ಡ ಮನುಷ್ಯನಿಗೆ ತೋರಿಸಿ, ಅವನಿಗೆ ಅದರಲ್ಲಿ ಸರಿಯರ್ಧ ಭಾಗವನ್ನು ಕೊಟ್ಟು ಅಲ್ಲಿಂದ ಹೊರಟನು.

ಈಗ ತಮ್ಮನು ಕೋಟೀಶ್ವರನೇ ಆದನು. ಆದರೆ ಅವನು ತಾನು ಮೊದಲು ಅನುಭವಿಸಿದ ದಾರಿದ್ರ್ಯವನ್ನು ಮರೆಯದೆ, ತನ್ನ ಗ್ರಾಮಕ್ಕೆ ಹಿಂದಿರುಗಿ ಬಂದ ಮೇಲೆ, ಕಣ್ಣಿಗೆ ಬಿದ್ದ ದರಿದ್ರರಿಗೆಲ್ಲಾ ಸಹಾಯ ಮಾಡುತ್ತಾ ಬಂದನು.

ಒಂದು ದಿನ ಬೀದಿಯಲ್ಲಿ ಅಣ್ಣ ತಮ್ಮಂದಿರಿಬ್ಬರೂ ಒಬ್ಬರನ್ನೊಬ್ಬರು ಸಂಧಿಸಿದರು. ತಮ್ಮನು ಅಣ್ಣನನ್ನು ಆಲಿಂಗಿಸಿಕೊಂಡು, ತನ್ನ ಮನೆಗೆ ಕರೆದುಕೊಂಡು ಹೋಗಿ ನಡೆದ ಸಂಗತಿಯನ್ನೆಲ್ಲಾ ವಿಸ್ತಾರವಾಗಿ ಹೇಳಿದನು. ಅವನು ಅಣ್ಣನನ್ನು ಅನೇಕ ದಿನಗಳವರೆಗೆ ತನ್ನ ಮನೆಯಲ್ಲೇ ಇಟ್ಟುಕೊಂಡು ಊಟ ಮಾಡಿಸಿ, ಹೊರಟು ಹೋಗುವಾಗ ಅವನಿಗೂ, ಅವನ ಹೆಂಡತಿಗೂ, ಮಕ್ಕಳಿಗೂ ಬೆಲೆ ಬಾಳುವ ಕಾಣಿಕೆಗಳನ್ನೂ ಕೊಟ್ಟು ಕಳುಹಿಸಿದನು.

ತಮ್ಮನ ಐಶ್ವರ್ಯವನ್ನು ನೋಡಿ ಅಣ್ಣನಿಗೆ ಸಹಿಸಲಾಗದೆ ಅಸೂಯೆಪಟ್ಟನು. ದರಿದ್ರ ದೇವತೆಯನ್ನು ಮತ್ತೆ ಅವನ ಮೇಲೆ ಕಳುಹಿಸಿಬಿಡುವುದೇ ಒಳ್ಳೆಯದೆಂದು ಅವನಿಗೆ ದುರ್ಬುದ್ಧಿ ಹುಟ್ಟಿತು.

ಅದಕ್ಕಾಗಿ ಅವನು ತಮ್ಮನು ಹೇಳಿದ ಕೆಸರು ಹೊಂಡದ ಬದಿಗೆ ಹೋಗಿ ತಮ್ಮನು ಅಲ್ಲಿ ಹುಗಿದಿಟ್ಟ ಸೀಸೆಯನ್ನು ಮೇಲಕ್ಕೆ ಎತ್ತಿ ಅದರ ಬಿರಡೆಯನ್ನು ತೆಗೆದನು.

ಮರುಕ್ಷಣವೇ ಸೀಸೆಯೊಳಗಿನಿಂದ ದರಿದ್ರ ದೇವತೆ ಮೇಲೆ ಬಂದು ಅಣ್ಣನನ್ನು ಅಪ್ಪಿಕೊಂಡಳು. 'ಅಹಾ! ನೀನು ಎಷ್ಟು ಪುಣ್ಯಾತ್ಮ! ನನಗೆ ಇಷ್ಟು ದೊಡ್ಡ ಉಪಕಾರ ಮಾಡಿದ ನಿನ್ನನ್ನು ಎಂದಿಗೂ ಬಿಡಲಾರೆನು. ನೀನು ಬದುಕಿರುವ ವರೆಗೂ ನಿನ್ನೊಂದಿಗೇ ಇರುತ್ತೇನೆ" ಎಂದಳು.

ಅಣ್ಣ ಅವಳನ್ನು ಮತ್ತೆ ಹುಗಿಯಬೇಕೆಂದುಕೊಂಡನು. ಆಗಲಿಲ್ಲ. ನದಿಯಲ್ಲಿ ಮುಳುಗಿಸಬೇಕೆಂದು ನೋಡಿದನು. ಅವನ ಯಾವ ಪ್ರಯತ್ನಕ್ಕೂ ಅವಳು ಸಿಕ್ಕಲಿಲ್ಲ. ದಾರಿಯಲ್ಲಿ ಅವನನ್ನು ಕಳ್ಳರು ಮುತ್ತಿ ಇದ್ದುದನ್ನೆಲ್ಲಾ ದೋಚಿಕೊಂಡರು. ಅವನು ಮನೆಗೆ ಹೋಗಿ ನೋಡಲು, ಮನೆಯೂ ಮನೆಯಲ್ಲಿದ್ದ ವಸ್ತು ಸಾಮಗ್ರಿಗಳೂ ಸುಟ್ಟುಹೋದುವು. ನೆರೆ ಬಂದು ಅವನ ಹೊಲದ ಬೆಳೆ ಪೂರಾ ಕೊಚ್ಚಿಕೊಂಡು ಹೋಯಿತು. ಭಿಕ್ಷುಕನಿಗಿಂತ ಹೀನವಾಯಿತು ಅವನ ಸ್ಥಿತಿ.





# ಕುಂಬಳಕಾಯಿ ಕಥೆ

**ಮೊಂ**ಚಾಲ ಹಾಡಿ ಎಂಬ ಊರಿನಲ್ಲಿ ಪಾಪಯ್ಯನೆಂಬೊಬ್ಬ ತೋಟಗಾರನಿದ್ದನು. ಅವನು ತರಕಾರಿ ಬೆಳೆಸುವುದರಲ್ಲಿ ತುಂಬ ಗಟ್ಟಿಗನು. ಅವನು ತನಗಿರುವ ಸ್ವಲ್ಪ ಮಾತ್ರ ಸ್ಥಳದಲ್ಲಿಯೇ ಚೆನ್ನಾಗಿ ಒಳಿತೆಗೆದು, ಗೊಬ್ಬರ ಸೇರಿಸಿ ಮಣ್ಣಿನೊಂದಿಗೆ ಬೆರೆಸಿ ದಂಡೆಕಟ್ಟಿ ಬೇರೆ ಬೇರೆ ತರಕಾರಿಗಳನ್ನು ಬೆಳೆಯಿಸಿ, ಅವುಗಳನ್ನು ಒಳ್ಳೆಯ ಬೆಲೆಗೆ ಮಾರಿ, ಬಂದ ಹಣದಿಂದ ತೃಪ್ತನಾಗಿ ಕಾಲಕ್ಷೇಪ ಮಾಡುತ್ತಿದ್ದನು. ತಾನು ಬೆಳೆಯಿಸಿದ ಕಾಯಿಪಲ್ಲೆಗಳ ಮೇಲೆ ಅವನಿಗೆ ಎಷ್ಟು ಪ್ರೀತಿಯೆಂದರೆ ತನ್ನ ತೋಟದ ದೊಡ್ಡ ದೊಡ್ಡ ಕುಂಬಳಕಾಯಿ, ಚೀನೀಕಾಯಿ ಮೊದಲಾದುವುಗಳಿಗೆ ಅವನು ಮುದ್ದುಮುದ್ದಾದ ಹೆಸರುಗಳನ್ನು ಇಡುತ್ತಿದ್ದನು. ಆ ಹೆಸರಿನಿಂದ ಕರೆಯುತ್ತಾ, ಸಂತೋಷಪಡುತ್ತಿದ್ದನು.

ಅದೇ ಊರಿನಲ್ಲಿ ಗೌರಣ್ಣನೆಂಬ ಇನ್ನೊಬ್ಬ ತೋಟಗಾರನಿದ್ದನು. ಪಾಪಯ್ಯನ ತೋಟಕ್ಕಿಂತ ಅವನ ತೋಟ ದೊಡ್ಡದಾಗಿದ್ದಿತು. ಆದರೆ ಗೌರಣ್ಣನಿಗೆ ಯಾವಾಗಲೂ ಹಣ ಸಂಪಾದಿಸಬೇಕೆಂಬ ಚಿಂತೆಯೇ ಹೊರತು ತೋಟಗಾರಿಕೆ ಚೆನ್ನಾಗಿ ಮಾಡಬೇಕೆಂಬುದರಲ್ಲಿ ಸಹನೆಯಾಗಲಿ, ಬುದ್ಧಿವಂತಿಕೆಯಾಗಲಿ ಇರಲಿಲ್ಲ. ಪಾಪಯ್ಯನ ತರಕಾರಿಗಳಷ್ಟು ಒಳ್ಳೆಯದಾಗಿ ಗೌರಣ್ಣನದು ಇರುವುದಿಲ್ಲ. ಹಾಗೆಯೇ ಅವನಷ್ಟು ಬೆಲೆಯೂ ಅಲ್ಲ. ಇದು ಅವನ ಮನಸ್ಸನ್ನು ಕೊರೆಯುತ್ತಿತ್ತು. ಆದರೆ ಉದಾಸೀನ ಬಿಟ್ಟು ದುಡಿಯಬೇಕೆಂದು ಮಾತ್ರ ತೋರಲಿಲ್ಲ.

"ಏನು ಗೌರಣ್ಣಾ, ನೀನು ಸ್ವಲ್ಪ ಓದಿಕೊಂಡಿದ್ದೀ. ಆ ಪಾಪಯ್ಯನಿಗೆ ಅದೇನೂ ಇಲ್ಲ. ಆದರೆ ನೀನು ಅವನಿಗೆ ಸಮಾನವಾದ ತರಕಾರಿಗಳನ್ನು ಬೆಳೆಸುವುದಿಲ್ಲವೇಕೋ ? ಅದೇ ಆಶ್ಚರ್ಯವಾಗಿದೆ !" ಎಂದು ಗೌರಣ್ಣನನ್ನು ಅನೇಕರು ಕೊರತೆ ಹೇಳುತ್ತಿದ್ದರು.

ಒಂದು ವರ್ಷ ಪಾಪಯ್ಯ ಅತ್ಯದ್ಭುತವಾದ ಕುಂಬಳಕಾಯಿಗಳನ್ನು ಬೆಳೆಸಿದನು. ಅಷ್ಟು ದೊಡ್ಡ ಕುಂಬಳಗಳನ್ನು ಯಾರೂ ಎಂದೂ ನೋಡಿರಲಿಲ್ಲ. ಅವುಗಳನ್ನು ನೋಡಿ ಪಾಪಯ್ಯನಿಗಾದ ಸಂತೋಷಕ್ಕೆ ಮೇರೆಯಿಲ್ಲ. ಬಹು ಪ್ರೀತಿಯಿಂದ ಅವನು ಆ ಕಾಯಿಗಳಿಗೆ "ಐರಾವತ", "ಪಾನಕ ಹಂಡೆ", "ಮಹಾಲಕ್ಷ್ಮಿ", "ದೊಡ್ಡಕ್ಕ",

"ಬಂಗಾರಪ್ಪ", "ಬೆಳ್ಳಿಬೋಗುಣಿ" ಎಂದು ಬೇರೆ ಬೇರೆ ಹೆಸರಿಟ್ಟನು. ಆ ವರ್ಷ ಇಂತಹ ಕಾಯಿಗಳು ಸುಮಾರು ನಲುವತ್ತರಷ್ಟು ಪಾಪಯ್ಯನ ತೋಟದಲ್ಲಿ ಬೆಳೆದುವು. ಹಿಂದೆ ಎಂದೂ ಅಷ್ಟು ದೊಡ್ಡ ಕುಂಬಳಕಾಯಿಗಳು ಬೆಳೆದುದಿಲ್ಲ.

ಸಂತೆಯ ಮುಂಚಿನ ದಿನ ಪಾಪಯ್ಯ ತನ್ನ ತೋಟಕ್ಕೆ ಹೋಗಿ ಯಾವ ಯಾವ ಕುಂಬಳ ಕಾಯಿಗಳನ್ನು ಕೊಯ್ಯಬಹುದೆಂದು ಗುರುತು ಮಾಡಿಕೊಂಡನು. ಬೆಳಂಜಾಮದಲ್ಲಿ ಗಾಡಿ ಸಿದ್ಧ ಪಡಿಸಬೇಕೆಂದು ಅಂದುಕೊಂಡನು. ಆ ರಾತ್ರಿ ಎಂದಿನಂತೆ ಮಲಗಿದರೂ ಪಾಪಯ್ಯನಿಗೆ ಸರಿಯಾಗಿ ನಿದ್ದೆ ಬರಲಿಲ್ಲ. ಆ ಕಾಯಿಗಳನ್ನು ತನ್ನ ಕೈಯಿಂದ ಸಂತೆಯಲ್ಲಿ ಮಾರುವುದೆಂದರೆ, ಬಹಳ ಅನುರಾಗದ ಮಗಳಂದಿರನ್ನು ಅತ್ತೆಯ ಮನೆಗೆ ಕಳುಹಿಸುವ ಹಾಗೆ ಅನಿಸಿತು ಅವನಿಗೆ. ಮಗಳನ್ನು ಮದುವೆ ಮಾಡಿ ಕಳುಹಿಸುವ ಹಾಗೆ ಕುಂಬಳಕಾಯಿಗಳನ್ನೂ ಒಯ್ದು ಮಾರಲೇಬೇಕಿತ್ತು.

ಬೆಳಗಾದ ಕೂಡಲೇ ಪಾಪಯ್ಯನು ಎದ್ದು, ಗಾಡಿ ಕಟ್ಟಿ ತೋಟಕ್ಕೆ ಹೋದನು. ಕುಂಬಳ ಬಳ್ಳಿಗಳ ನಡುವಿಗೆ ಹೋಗುವಷ್ಟರಲ್ಲಿ ಪಾಪಯ್ಯನ ಎದೆ ಧಸಕ್ಕೆಂದಿತು.

ದೊಡ್ಡ ದೊಡ್ಡ ಕುಂಬಳಕಾಯಿಗಳೆಲ್ಲವನ್ನೂ ಯಾರೋ ಕೊಯಿದುಕೊಂಡು ಹೋಗಿದ್ದರು. ಪಾಪಯ್ಯನಿಗೆ ಬುದ್ಧಿ ಭ್ರಂಶವಾದಂತಾಯಿತು. ಹುಚ್ಚನ ಹಾಗೆ ಬಳ್ಳಿಗಳ ಮಧ್ಯದಲ್ಲಿ ಬಹಳ ಹೊತ್ತು ತಿರುಗಾಡಿದನು. ತನ್ನ ಕುಂಬಳಕಾಯಿಗಳನ್ನು ಕದ್ದವನನ್ನು ಬಾಯಿಗೆ ಬಂದ ಹಾಗೆ ಬಯ್ದುಕೊಂಡನು.

ಅಷ್ಟರಲ್ಲಿ ಪಾಪಯ್ಯನಿಗೊಂದು ಆಲೋಚನೆ ಬಂದಿತು. ಕಳವಾದುದು ಒಂದೆರಡಲ್ಲ, ನಲುವತ್ತು ಕುಂಬಳಕಾಯಿಗಳು! ಎಲ್ಲಿಗೆ ಹೋದಾವು? ಹೋದರೆ ಸಂತೆಗೇ ಹೋಗಬೇಕು. ಬೇರೆ ಕಡೆಗೆ ಒಯ್ಯುವುದರಿಂದ ಪ್ರಯೋಜನವಿಲ್ಲ. ಅವುಗಳು ಎಲ್ಲಿದ್ದರೂ ತಾನು ಗುರುತಿಸಬಲ್ಲೆನು! ಮೊದಲು ಸಂತೆಯ ಕಡೆಗೇ ಹೋಗಬೇಕು.



ಕೂಡಲೇ ಪಾಪಯ್ಯ ಗಾಡಿಯಲ್ಲಿ ಏರಿಕೊಂಡು ಒಂದು ಗಂಟೆಯೊಳಗೆ ಸಂತೆಗೆ ಹೋಗಿ ಮುಟ್ಟಿದನು. ಕಾಯಿ ಪಲ್ಯಗಳನ್ನು ಮಾರುವ ಎಲ್ಲಾ ಅಂಗಡಿಗಳ ಮುಂದೆ ತಿರುಗಾಡಿದನು. ಒಂದು ಅಂಗಡಿಯಲ್ಲಿ ಅವನಿಗೆ ತನ್ನ ತೋಟದ ಕುಂಬಳ ಕಾಯಿಗಳೆಲ್ಲಾ ಒಂದು ರಾಶಿಯಾಗಿರುವುದು ಕಂಡಿತು.

ಪಾಪಯ್ಯ ಬೇಗನೇ ಆ ಅಂಗಡಿಯವನ ಹತ್ತಿರ ಹೋಗಿ, "ಇದೆಂಥಾ ಕೆಲಸ! ಕಳ್ಳತನ! ನನ್ನ ತೋಟದ ಕುಂಬಳಕಾಯಿಗಳನ್ನು ಕದ್ದು ತಂದು ನಿನ್ನ ಅಂಗಡಿಯಲ್ಲಿ ಮಾರಲಿಕ್ಕೆ ಇಟ್ಟಿರುವಿ! ಏನು ಧೈರ್ಯವಯ್ಯಾ ನಿನಗೆ? ಸರಿಯಾ ಇದು?" ಎಂದು ಕೋಪದಿಂದ ಗುಡುಗಿ ಕೇಳಿದನು.

ಅವನು ಹೇಳುವುದನ್ನು ಕೇಳುತ್ತ ಅಂಗಡಿಯವನು ಬೆರಗಾಗಿ, "ಇದೆಲ್ಲಾ ನಾನು ಕಳ್ಳತನ ಮಾಡಿ ತಂದದ್ದಲ್ಲಪ್ಪಾ, ನಿನ್ನ ಊರಿನ ಗೌರಣ್ಣ ಇದೀಗ ಸ್ವಲ್ಪಹೊತ್ತಿನ ಮುಂಚೆ ನನಗೆ ಮಾರಿ ಹತ್ತು ರೂಪಾಯಿ ತೆಗೆದುಕೊಂಡು ಹೋದ. ಅವನನ್ನು ಕೇಳಿ ನೋಡಪ್ಪಾ" ಎಂದನು.

"ಗೌರಣ್ಣ ಇನ್ನೂ ಹಿಂದಿರುಗಿ ಹೋಗಲಿಲ್ಲ. ಹತ್ತಿರದ ಇನ್ನೊಂದು ಅಂಗಡಿಯಲ್ಲಿ ಇದ್ದಾನೆ" ಎಂದನು ಅಲ್ಲಿದ್ದವನೊಬ್ಬ.

ಪಾಪಯ್ಯ ಕೂಡಲೇ ಸಂತೆಯ ಅಧಿಕಾರಿಯ ಹತ್ತಿರ ಹೋಗಿ ಗೌರಣ್ಣ ತನ್ನ ಕುಂಬಳಕಾಯಿಗಳನ್ನೆಲ್ಲಾ ಕೊಯಿದು ತಂದು ಸಂತೆಯ ಅಂಗಡಿಯವರಿಗೆ ಮಾರಿಬಿಟ್ಟನೆಂದು ಫಿರ್ಯಾದಿ ಮಾಡಿದನು. ಗೌರಣ್ಣನನ್ನು ನಾಲ್ಕು ಮಂದಿ ಸೇರಿ ಕರೆದು ತಂದರು. ಎಲ್ಲರೂ ಸೇರಿ ಕುಂಬಳಕಾಯಿಗಳಿರುವ ಅಂಗಡಿಗೆ ಬಂದರು.

"ಈ ಕುಂಬಳಕಾಯಿಗಳೆಲ್ಲ ನಿನ್ನದೇ ಎಂದು ಹೇಗೆ ಹೇಳುತ್ತೀ?" ಎಂದು ಅಧಿಕಾರಿ ಪಾಪಯ್ಯನನ್ನು ಕೇಳಿದನು.

"ನನಗೆ ಗೊತ್ತಿಲ್ಲವೆಂದರೇನು? ನಾನು ಬೆಳೆಸಿದವನಲ್ಲವೇ? ಇದೋ ಇದು ಮಹಾಲಕ್ಷ್ಮಿ,



ಅಗೋ ಅದು ಐರಾವತ..." ಎಂದು ಒಂದೊಂದೇ ಕುಂಬಳಕಾಯಿಯನ್ನು ಪಾಪಯ್ಯ ತೋರಿಸ ತೊಡಗಿದನು.

ಸುತ್ತಲೂ ಸೇರಿದವರು ಪಾಪಯ್ಯನ ಅಮಾಯಕ ತನವನ್ನು ನೋಡಿ ನೆಗಾಡಿದರು. ಅಧಿಕಾರಿ ಕೂಡಾ ನಗುತ್ತ, "ಅದಲ್ಲವಪ್ಪಾ, ಈ ಕಾಯಿಗಳನ್ನು ನೀನು ಗುರುತಿಸುವುದಲ್ಲ, ಅವು ನಿನ್ನವೇ ಎಂದು ಇತರರು ಹೇಳುವಂತಹ ಸಾಕ್ಷಿಗಳು ಬೇಕು" ಎಂದನು.

ಪಾಪಯ್ಯನಿಗೆ ಏನೂ ತೋರಲಿಲ್ಲ.

"ಇವನೊಬ್ಬ ಸರಳ ಮನುಷ್ಯ ಬಿಡಿರಿ. ನನ್ನ ಹತ್ತಿರ ನಾನು ಬೆಳೆಯಿಸುವ ತರಕಾರಿಗಳ ಲೆಕ್ಕಗಳೂ, ಅವುಗಳನ್ನು ಮಾರಿದ ಲೆಕ್ಕಗಳೂ ಬರೆದ ಪುಸ್ತಕವೇ ಇದೆ. ಬೇಕಾದರೆ ಈಗಲೇ ಹೋಗಿ ತಂದುಬಿಡುತ್ತೇನೆ" ಎಂದನು ಗೌರಣ್ಣ.

ಆ ಮಾತು ಕೇಳಿ ಪಾಪಯ್ಯ, "ಅಯ್ಯಾ, ಇವೆಲ್ಲ ನನ್ನ ಕಾಯಿಗಳೇ ಎನ್ನಲು ನನ್ನ ಹತ್ತಿರ ಕೂಡಾ ಸರಿಯಾದ ಲೆಕ್ಕವಿದೆ. ನಾನೂ ಆ ಸಾಕ್ಷಿಗಳನ್ನು ತರುತ್ತೇನೆ!" ಎಂದನು.

ಅದನ್ನು ಕೇಳಿ ಗೌರಣ್ಣ ಬಿದ್ದು ಬಿದ್ದು ನಕ್ಕನು.

ಅಧಿಕಾರಿ ಇಬ್ಬರು ಭಟರನ್ನು ಅವರಿಬ್ಬರ ಹಿಂದೆ ಅವರ ಊರಿಗೆ ಕಳುಹಿಸಿದನು. ಸ್ವಲ್ಪಹೊತ್ತಿಗೆ ಇಬ್ಬರೂ ತಿರುಗಿಬಂದರು. ಗೌರಣ್ಣನು ತನ್ನ ಲೆಕ್ಕದ ಪುಸ್ತಕ ತಂದಿಟ್ಟನು. ಪಾಪಯ್ಯ ತನ್ನ ಮೇಲು ವಸ್ತ್ರದ ಅಂಚಿನಲ್ಲಿ ಏನನ್ನೋ ಗಂಟುಕಟ್ಟಿ ತಂದಿದ್ದನು.

ಗೌರಣ್ಣ ತನ್ನ ಲೆಕ್ಕದಲ್ಲಿ ಆ ದಿನ ನಲುವತ್ತು ಕುಂಬಳಕಾಯಿಗಳನ್ನು ತನ್ನ ತೋಟದಿಂದ ಕೊಯಿದು ಸಂತೆಗೆ ತಂದ ವಿಷಯ ಬರೆದಿತ್ತು.

"ನಿನ್ನ ಲೆಕ್ಕ ಎಂತಹದಪ್ಪಾ?" ಎಂದು ಅಧಿಕಾರಿ ಪಾಪಯ್ಯನನ್ನು ಕೇಳಿದನು.

ಪಾಪಯ್ಯ ಬಟ್ಟೆಯ ಗಂಟುಬಿಚ್ಚಿ, ಅದರೊಳಗಿದ್ದ ಕುಂಬಳದ ತೊಟ್ಟುಗಳನ್ನು ತೆಗೆದು, ಅಯ್ಯಾ, ಇದೋ ನನ್ನ ಸಾಕ್ಷಿಗಳು" ಎಂದು ಒಂದೊಂದು ತೊಟ್ಟನ್ನು ಒಂದೊಂದು ಕುಂಬಳಕಾಯಿಗೆ ಹೊಂದಿಸುತ್ತ, "ಇದು ಐರಾವತದ್ದು, ಇದು ಮಹಾಲಕ್ಷ್ಮಿಯದು..." ಎನ್ನುತ್ತಾ ಹೋದನು. ಅವೆಲ್ಲಾ ಆಯಾ ಕುಂಬಳಗಳಿಗೆ ಸರಿಹೊಂದಿದುವು.

ಕೂಡಲೇ ಅಧಿಕಾರಿ ಗೌರಣ್ಣನನ್ನು ನಿಂದಿಸಿ, ಅವನಿಂದ ಪಾಪಯ್ಯನಿಗೆ ಕುಂಬಳಕಾಯಿಯ ಬೆಲೆಯನ್ನು ಕೊಡಿಸಿದನು. ಅಂದಿನಿಂದ ಗೌರಣ್ಣನನ್ನು ಎಲ್ಲರೂ ಕುಂಬಳ ಕಳ್ಳ, ಗೌರ ಎಂದು ಹೇಳತೊಡಗಿದರು. ಗೌರಣ್ಣ ನಾಚಿ ಬಹಳ ದಿನಗಳವರೆಗೆ ಊರವರ ಕಣ್ಣಿಗೆ ಬೀಳದೆ ಅಡಗಿಕೊಂಡಿದ್ದನು.






## ಕೊರೆತ

ಒಂದು ರಾತ್ರಿಯಲ್ಲಿ ೭೦ ಗಜಗಳಷ್ಟು ಸುರಂಗ ಕೊರೆಯುವ ಶಕ್ತಿ ಅಡವಿ ಇಲಿಗಳಿವೆ ಇದೆ !



## ಬಹು ನಿಧಾನದಲ್ಲಿ ಹೂಬಿಡುವ ಗಿಡ!

ಪ್ರಪಂಚದೊಳಗೆಲ್ಲಾ ಬಹು ನಿಧಾನವಾಗಿ ಹೂಬಿಡುವ ಪೂಯಾರಾಯ್ ಮೋಂಡೀ ಎಂಬ ಅಪರೂಪವಾದ ಗಿಡ ಬೋಲ್ವಿಯಾದಲ್ಲಿದೆ. ಎಂಟು ಅಡಿಗಳ ಅಗಲಕ್ಕೆ ೩೫ ಅಡಿಗಳಷ್ಟು ಎತ್ತರ ಬೆಳೆಯುವ ಈ ಗಿಡ ನೂರೈವತ್ತು ವರ್ಷಗಳ ಮೇಲೆ ಹೂಬಿಡುತ್ತದೆ. ಆಮೇಲೆ ಸಾಯುತ್ತದೆ.



## ಹಾರುವ ಹಾವು

ಏಷ್ಯಾದಲ್ಲಿ ಕಾಣುವ ಹಾರುವ ಹಾವು ಸುರುಳಿಸುತ್ತಿ, ಹೋಗಿ ಒಮ್ಮೆಗೇ ಮೇಲೆ ಹಾರಿ ಒಂದೇ ಸಾರಿ ಒಂದು ಮೀಟರಿ ನಷ್ಟು ದೂರ ದಾಟಬಲ್ಲುದು !

## ಫೋಟೋ ಶೀರ್ಷಿಕೆಯ ಸ್ಪರ್ಧೆ : : ಬಹುಮಾನ ರೂ. ೫೦

ಗೆದ್ದ ಶೀರ್ಷಿಕೆಗಳು ೧೯೭೮ ಡಿಸೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.



S. B. Prasad



M. Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು. ★ ಅಕ್ಟೋಬರ್ ೧೦ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ. ★ ಶೀರ್ಷಿಕೆಗಳಲ್ಲಿ ಅತ್ಯುತ್ತಮವೆಂದು ನಾವು ನಿರ್ಧರಿಸುವ ಒಂದು ಜತೆಗೆ ರೂ. ೫೦ ಬಹುಮಾನ. ★ ಶೀರ್ಷಿಕೆಗಳನ್ನು ಪೋಸ್ಟ್ ಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು.

ವಿಳಾಸ : ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಆಗಸ್ಟ್ ಸ್ಪರ್ಧೆಯ ಫಲಿತಾಂಶ :

ಮೊದಲನೇ ಫೋಟೋ : ತುತ್ತು ಕೊಟ್ಟು ಹೊಟ್ಟೆ ತುಂಬಿಸುವವನಿಗೆ

ಎರಡನೇ ಫೋಟೋ : ಎತ್ತಿಕೊಡುವ ಕೃತಜ್ಞತೆಯುಂಟು ಆನೆಗೆ

ಕಳುಹಿಸಿದವರು : ಜಯಶ್ರೀ, ೩, ೫ ನೇ ಕ್ರಾಸ್, ಬೆಂಗಳೂರು-೩೦

ಬಹುಮಾನ ರೂ. ೫೦/- ಈ ತಿಂಗಳ ಆಖೈರಿನೊಳಗೆ ಕಳುಹಿಸಲಾಗುವುದು


## ಚಂದಮಾಮ

ಇಂಡಿಯಾದಲ್ಲಿ ವಾರ್ಷಿಕ ಚಂದಾ : ರೂ. ೩೦-೦೦

ಡಾಲ್ಟನ್ ಏಜನ್ಸೀಸ್, ಚಂದಮಾಮ ಬಿಲ್ಡಿಂಗ್ಸ್, ವಡಪಳನಿ, ಮದರಾಸು-೬೦೦ ೦೨೬

ಬೇರೆ ದೇಶಗಳ ಚಂದಾ ವಿವರಗಳಿಗೆ ಬರೆಯಿರಿ :

ಚಂದಮಾಮ ಪಬ್ಲಿಕೇಷನ್ಸ್, ಚಂದಮಾಮ ಬಿಲ್ಡಿಂಗ್ಸ್, ವಡಪಳನಿ, ಮದ್ರಾಸು-೬೦೦ ೦೨೬

Printed by B.V. REDDI at Prasad Process Private Ltd., 188 N.S.K. Salai, Madras 600 026 (India) and Published by B. VISWANATHA REDDI on behalf of CHANDAMAMA PUBLICATIONS, Chandamama Buildings, Vadapalani, Madras 600 026 (India). Controlling Editor: NAGI REDDI.


---